# ಸದಾಶಿವ ಸೂಕ್ತಿ

ಸೂರ್ಯಸಿಂಹಾಸನಾಧೀಶ್ವರ

ಡಾ|| ಜ. ಚ. ನಿ.

ಪ್ರಕಾಶಕರು :

**ಶ್ರೀ ಶೈಲಜಗದ್ಗುರು ನಿಡುಮಾಮಿಡಿ ಪುಸ್ತಕಭಂಡಾರ**

ನಂ. ೪೯, ಹ. ಬ. ಸಮಾಜರಸ್ತೆ, ಬಸವನಗುಡಿ, ಬೆಂಗಳೂರು-೪.

# ನಮ್ಮ ನುಡಿ

ಇಪ್ಪತ್ತನೆಯ ಶತಮಾನದ ವೀರಶೈವ ಶಿವಾಚಾರ್ಯರಲ್ಲಿ ವಿಶಿಷ್ಟ ಸ್ಥಾನ ಮಾನ ಗಳಿಸಿದವರು ಸಖರಾಯ ಪಟ್ಟಣದ ಶ್ರೀ ಸದಾಶಿವ ಶಿವಾಚಾರ್ಯರು. ಇವರು ಕ್ರಿ.ಶ. ೧೯೦೧ರಲ್ಲಿ ಕಂಚಗಲ್ ಬಿದರಿಯಲ್ಲಿ ಜನಿಸಿದರು. ಪ್ರಾಥಮಿಕಾಭ್ಯಾಸ ಪೂರೈಸಿ, ಶಿವಯೋಗಮಂದಿರ ಸೇರುವರು. ಅಲ್ಲಿ ಮನ ಮೆಚ್ಚಿ ಸತ್ಯಸಾಧಕರಾಗಿರುವರು. ಅಧ್ಯಯನದಲ್ಲಿ ಅರ್ಚನೆಯಲ್ಲಿ ಆಚಾರ ವಿಚಾರದಲ್ಲಿ ಯೋಗಾನುಷ್ಠಾನದಲ್ಲಿ ಲೇಖನ ಕಲೆಯಲ್ಲಿ ಸಾತ್ವಿಕಸ್ವಭಾವದಲ್ಲಿ ತಾತ್ತ್ವಿಕ ಕ್ರಿಯಾಶೀಲತೆಯಲ್ಲಿ ಮುನ್ನಡೆದವರು. ಅಖಿಲಭಾರತ ವೀರಶೈವ ಮಹಾಸಭೆ ಮತ್ತು ಶಿವಯೋಗಮಂದಿರ ಸಂಸ್ಥಾಪಕರಾದ, ಈ ಶತಮಾನದ ಯುಗ ಪುರುಷರಾದ ಕಾರಣಿಕ ಕುಮಾರ ಮಹಾಸ್ವಾಮಿಗಳವರ ಘನ ಕೃಪೆಗೆ ಪಾತ್ರರಾಗುವರು. ತ್ಯಾಗ-ಯೋಗಗಳಲ್ಲಿ ಅನುರಕ್ತಿ. ವಿಧಿ-ವಿಧಾನ ರಚನೆ ಯಲ್ಲಿ ಅತ್ಯಾಸಕ್ತಿ. ಮನಸ್ಸಿಲ್ಲದ ಮನಸ್ಸಿನಿಂದ ಸಖರಾಯಪಟ್ಟಣದ ಶಿವಾಚಾರ್ಯ ಮಠದ ಪಟ್ಟಾಧಿಕಾರವನ್ನು ವಹಿಸುವರು. ಗಿರಿಯಪುರಕ್ಕೆ ಆಗಮಿಸುವರು. ಅಲ್ಲಿದ್ದು ಗುರುಕಾರ್ಯವನ್ನು ಆಗುಮಾಡುವರು. ಜೊತೆಗೆ ಶಿಷ್ಯರ ನೆರವಿನಿಂದ ಶ್ರೀ ಗುರು ಕುಮಾರಾಶ್ರಮವೊಂದನ್ನು ಸ್ಥಾಪಿಸುವರು. ಸ್ವಾಧ್ಯಾಯ ಶಿವಯೋಗಾನುಷ್ಠಾನ ಗಳು ಮುನ್ನಡೆದವು. ಅಲ್ಲಿ 'ಶಿವಾದ್ವೈತ ತತ್ತ್ವಪ್ರಚಾರ ಕೇಂದ್ರ' ವೊಂದನ್ನು ನಿರ್ಮಿಸಿ ಯಶಸ್ವಿಯಾಗಿ ನಡೆಸುವರು. ತತ್ತ್ವಪ್ರಚಾರವನ್ನು ಭಾಷಣ-ಪ್ರವಚನ-ಕೀರ್ತನ-ಗ್ರಂಥ ಪ್ರಕಾಶನಗಳ ಮೂಲಕ ಗಮನಾರ್ಹವಾಗಿ ನಡೆಸುವರು. ಜನರನ್ನು ಸುಸಂಸ್ಕೃತರನ್ನಾಗಿಸುವರು. ಅರ್ಚನ ಅರ್ಪಣ ಅನುಭವಗಳಲ್ಲಿ ಅನೇಕರನ್ನು ಪರಿಣತ ರನ್ನಾಗಿಸುವರು. ಶೀಲಾಚರಣೆ-ಯೋಗ-ಶಿವಯೋಗ ಸಾಧನೆಗಳಲ್ಲಿ ತಾವು ನಿರತ ರಾಗಿದ್ದುದಲ್ಲವೆ ಜನತೆಯನ್ನೂ ನಿರತರನ್ನಾಗಿಸಿದರು. ಅವರದೇ ಆದ ಒಂದು ಗ್ರಂಥಾಲಯವೊಂದಿದೆ. ಅವರೇ ಸುಮಾರು ಇಪ್ಪತ್ತಯ್ದು ಹೊತ್ತಗೆಗಳನ್ನು ರಚಿಸಿ ದ್ದಾರೆ. ವೀರಶೈವ ಸರ್ವಸಾಂಸ್ಕೃತಿಕ ವಿಧಿ ವಿಧಾನಗಳನ್ನು ತಮ್ಮ ಪವಿತ್ರ ಹಸ್ತದಿಂದ ರೂಪಿಸಿ ಈ ದಿಸೆಯಲ್ಲಿ ಅಪ್ರತಿಮ ಸೇವೆ ಸಲ್ಲಿಸಿದ್ದಾರೆ. ಅಲ್ಲವೆ ಎಲ್ಲಕ್ಕೂ ಮಿಗಿಲಾದ ಕಾರ್ಯವೆಂದರೆ ಕೈವಲ್ಯೋಪನಿಷತ್ ಸಾದಾಶಿವ ಭಾಷ್ಯರಚನೆ! ವೀರಶೈವ ಯಾವ ಶಿವಾಚಾರ್ಯರೂ ಮಾಡದ ಮಹಾ ಮಣಿಹವಿದು. ಇದರಿಂದ 'ಭಾಷ್ಯಾಚಾರ್ಯ'ರೆಂದು ಹೆಸರಾಂತಿದ್ದಾರೆ. ಇದು ಇವರ ಅಸಾಮಾನ್ಯ ಕಾರ್ಯ. ಶೀಲಾಚರಣೆಯಲ್ಲಿಯೂ

ಇವರದು ಅಸದೃಶ ಸಾಧನ. ಯೋಗದಲ್ಲಿಯೂ ಇವರದು ಅಪ್ರತಿಮ ಸಾಧನ, ಅಪೂರ್ವಸಿದ್ಧಿ. ಕನ್ನಡ ಸಂಸ್ಕೃತ ಎರಡು ಭಾಷೆಯಲ್ಲಿ ಪರಿಣತರು. ಇವರು 'ಯೋಗರವಿ' ಎಂದು 'ಶೀಲಶಶಿ' ಎಂದು ಹೆಸರಾಂತರು. ನಿಜಗುಣರ ಷಟ್‌ಶಾಸ್ತ್ರಗಳು ಇವರ ಕರತಲಾಮಲಕವಾಗಿದ್ದವು. ನಿಗಮಾಗಮೋಪನಿಷತ್ತುಗಳ ಅಧ್ಯಯನ ನಿರತರು. ವಚನವಾಙ್ಮಯ ವಿಶಾರದರು. ಸ್ವತಃ ವಚನರಚಕರು. ಯಾವ ಸಣ್ಣಪುಟ್ಟ ಆಶೆ ಆಶೋತ್ತರಗಳಿಗೆ ಒಳಗಾದವರಲ್ಲ. ನೈಷ್ಠಿಕ ಬ್ರಹ್ಮಚರ್ಯ ಪರಿಪಾಲಕರು, ಸದಾಚಾರ ಶಿವಾಚಾರ ಲಿಂಗಾಚಾರ ಗಣಾಚಾರ ಭೃತ್ಯಾಚಾರಗಳನ್ನು ಚಾಚೂ ತಪ್ಪದೆ ಆಚರಣೆ ಯಲ್ಲಿ ತಂದುಕೊಂಡಿದ್ದರು. ಷಟ್‌ಸ್ಥಲಾನುಭಾವಿಗಳು. ಅಷ್ಟಾವರಣ ನಿಷ್ಠರು. ನಿತ್ಯನಿರ್ಮಲರು. ಸತ್ಯಸಂಧರು. ಸಚ್ಚಿತ್‌ಸ್ವರೂಪರು. ಪೂರ್ಣಪರಿಣತರು. ಎಲ್ಲ ಬಗೆಯಲ್ಲಿ ಇಪ್ಪತ್ತನೆಯ ಶತಮಾನದ ಏಕೈಕ ಶಿವಾಚಾರ್ಯರೆಂದರೆ ತೆಗೆದು ಹಾಕುವ ಮಾತಲ್ಲ. ಇವರ ಬಗೆಗೆ ಈಗಾಗಲೇ 'ಸದಾ-ಶಿವ-ರುದ್ರಂ' ಎಂಬ ಸಮಕಾಲೀನ ಸೃಜನಾತ್ಮಕ ಕಾವ್ಯವೊಂದು ಬೆಳಕಿಗೆ ಬಂದಿದೆ. ಅದು ನಾಡ ಸಾಹಿತಿಗಳಿಂದ ಮನ್ನಣೆ ಪಡೆದಿದೆ. ಧಾರ್ಮಿಕ ಕ್ಷೇತ್ರದಲ್ಲಿ ಇದೀಗ ಹೆಚ್ಚಿರುವ ಸಾಂಪ್ರದಾಯಿಕ ಪೌರಾಣಿಕ ಪರಂಪರೆಯನ್ನು ಎದುರಿಸಿದ ಅಗ್ಗಳಿಕೆ ಇದಕ್ಕಿದೆ. ಈ ದಿಸೆಯಲ್ಲಿ ಈ 'ಸದಾಶಿವ ಸೂಳ್ನುಡಿ'ಯೂ ಒಂದು. ಇವರ ಬಗೆಗೆ ಕಿರುಹೊತ್ತಗೆ! ಆದರೂ ಇದರದೆ ಆದ ವೈಲಕ್ಷಣ್ಯವಿಲ್ಲದಿಲ್ಲ. ಅದು ವಚನ ರೂಪದಲ್ಲಿ ಬಂದಿದೆ ಆಗಿದೆ. ಇದನ್ನು ಅಂದಾಗಿ ಅಚ್ಚಿಸಿ ಬೆಳಕಿಗೆ ತರುವ ಸೇವೆ ಯನ್ನು ಸಲ್ಲಿಸಿ ತಮ್ಮ ಕಾಯಕವನ್ನು ಕೃತಾರ್ಥವನ್ನಾಗಿಸಿಕೊಂಡ ಮೈಸೂರು ಪ್ರಬೋಧ ಪುಸ್ತಕಮಾಲೆಯ ಆಸ್ಥಾನ ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯರನ್ನು ನೆನೆಯದಿರೆವು.

—ಕೃತಿಕರ್ತರು



# ಸಮರ್ಪಣೆ

ಪರಮಪೂಜ್ಯ ಶ್ರೋತ್ರಿಯಬ್ರಹ್ಮನಿಷ್ಠ ಶಿವಯೋಗಾನುಸಂಧಾನನಿರತ

ಆಚಾರ ವಿಚಾರಾನುಷ್ಠಾನಶೀಲ ಶಿವಾನುಭವನಿಷ್ಠಾಗರಿಷ್ಠ

ಶ್ರೀಗುರು ಕುಮಾರಾಶ್ರಮ ಸಂಸ್ಥಾಪಕ ಗಿರಿಯಪುರ

ಶಿವಾದ್ವೈತ ತತ್ತ್ವಪ್ರಚಾರಕೇಂದ್ರಾಧ್ಯಕ್ಷ

ಲಿಂಗೈಕ್ಯ

**ಷ|| ಬ್ರ|| ಶ್ರೀ ಪಟ್ಟಾಧ್ಯಕ್ಷ**

**ಶ್ರೀ ಶ್ರೀ ಸದಾಶಿವಶಿವಾಚಾರ್ಯ**

ಮಹಾಸ್ವಾಮಿಗಳವರ ಅಡಿದಾವರೆಯಲ್ಲಿ

ಭಕ್ತಿಸಮರ್ಪಣೆ

# ಸದಾಶಿವ ಸೂಳ್ನುಡಿ

**ಮಾತೆಂಬ ಜ್ಯೋತಿ !**

ಪಾತಾಳದಗ್ಗವಣಿಯ ನೇಣಿಲ್ಲದೆ ತೆಗೆಯಬಹುದೆ–
ಸೋಪಾನದ ಬಲದಿಂದಲ್ಲದೆ ?
ಶಬ್ದ ಸೋಪಾನದ ಬಲದಿಂದ ನಿಶ್ಶಬ್ದ ಸೋಪಾನವ ಕಟ್ಟಿ
ನಡಸಿದರು ನಮ್ಮ ಪುರಾತನರು ;
ದೇವಲೋಕಕ್ಕೆ ಬಟ್ಟೆ ಕಾಣಿರೋ !
ಮರ್ತ್ಯರ ಮನದ ಮೈಲಿಗೆಯ ಕಳೆಯಲೆಂದು
ಗೀತ ಮಾತೆಂಬ ಜ್ಯೋತಿಯ ಬೆಳಗಿಟ್ಟರು,
ಕೂಡಲ ಚನ್ನ ಸಂಗಯ್ಯಾ ನಮ್ಮ ಶರಣರು,

—ಚನ್ನಬಸವಣ್ಣ.

# ಸದಾಶಿವ ಸೂಳ್ನುಡಿ

೧

ಆಚಾರ ಲಕ್ಷಣವಂತರು ಶ್ರೀ ಸದಾಶಿವ ಶಿವಾಚಾರ್ಯರು.
ಆಚಾರ ದ್ರವಿಣವಂತರು ಶ್ರೀ ಸದಾಶಿವ ಶಿವಾಚಾರ್ಯರು.
ಆಚಾರ ಘನವಂತರು ಶ್ರೀ ಸದಾಶಿವ ಶಿವಾಚಾರ್ಯರು.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರನಲ್ಲಿ
ಶ್ರೀ ಸದಾಶಿವ ಶಿವಾಚಾರ್ಯರ ಶ್ರೀ ಚರಣಕ್ಕೆ ಶರಣು ಶರಣಾರ್ಥಿ !

೨

ಮಠಕ್ಕಾಗಿ ಬಂದಾತನಲ್ಲ, ಘಟಕ್ಕಾಗಿ ಬಂದಾತನಲ್ಲ ;
ಹಟ–ಚಟಂಗಳಿಗಾಗಿ ಬಂದಾತನಲ್ಲ.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಸದಾ ಶಿವಾಚಾರ ಪಥವ ತೋರ ಬಂದಾತನಯ್ಯಾ,
ನಮ್ಮ ಸದಾಶಿವ ಶಿವಾಚಾರ್ಯ ಶ್ರೀ ಗುರುದೇವನು.

೩

ಇಪ್ಪತ್ತನೆಯ ಶತಮಾನದಲಿ
ಒಪ್ಪಿರ್ದನಯ್ಯ ಕೈವಲ್ಯೋಪನಿಷದ್ ಭಾಷ್ಯಾ ಚಾರ್ಯನೆಂದು ;
ಒಪ್ಪಿರ್ದನಯ್ಯ ಯೋಗ ರವಿ, ಶೀಲಶಶಿ ತಾನೆಂದು ;
ಒಪ್ಪಿರ್ದನಯ್ಯ ಲಿಂಗಪೂಜಾ ನಿಧಿಯೆಂದು–
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಒಪ್ಪಿರ್ದನಯ್ಯ ಗಿರಿ ಪುರದ ಗುರು ಕುಮಾರಾಶ್ರಮದಲ್ಲಿ
ಸದಾ–ಶಿವನೆ ತಾನಾಗಿ ತನಗನ್ಯವಿಲ್ಲಾಗಿ !

೪

ಸದಾಶಿವ ಶಿವಾಚಾರ್ಯರ ಸರ್ವಾಂಗವೆ ಶಿವಲಿಂಗಾಲಯ.
ಸದಾಚಾರವೆ ಭಿತ್ತಿ. • ಶಿವ ವಿಚಾರವೆ ವಿದ್ಯುದ್ ದೀಪ್ತಿ.
ಶಿವಾತ್ಮ ಚೈತನ್ಯವೆ ಶಿವಲಿಂಗ ; ಕರಸ್ಥಲವೆ ವರ ಪೀಠಾಂಗ,

ವಿನಯವೆ ಅಗ್ಗವಣಿ ; ಸದ್ಗುಣ ಗಣವೆ ಪೂಜಾ ಸಾಹಿತ್ಯದಣಿ.
ತ್ರಿಗುಣಂಗಳೆ ತ್ರಿದಲ ; ಹೃದಯವೆ ಕಮಲ.
ಉಗ್ಗಡಿಪ ಓಂಕಾರವೆ ಜಾಗಟೆಯ ನಾದ ;
ಲಿಂಗ ಸಂಗ ಸಂವೇದನವೆ ಸಂಮೋದ.
ಮನವೆ ಎಡೆ ಬಟ್ಟಲು, ಮನನವೆ ಎಡೆ ಬಡಿಸಿದ ಮೀಸಲು ;
ನಿಚ್ಚಟ ನಿರಾಳವೆ ಆರೋಗಣೆಯು.
ನಿರಾಮಯತೆಯೆ ನಿಜೈಕ್ಯವು.
ಇಂತಿದು ಗುರು ದೇವನ ನಿಬ್ಬೆರಗಿನ ನಿಲು ಕಡೆಯ
ನಿತ್ಯಾರ್ಚನ ಕಂಡಯ್ಯ,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ !

೫

ಕೇಳಿರೆ, ನಮ್ಮ ಶ್ರೀ ಗುರು ಸದಾಶಿವನು,
ಸದಾ–ಶಿವನಂತಿರ್ದನು.
ಅಶಿವ ಆತನ ಬಳಿ ಅದೊರ್ಮೆಯು ಸುಳಿದುದಿಲ್ಲ.
ಆತ ಕಾಮಿಸಲಿಲ್ಲ, ಕಲ್ಪಿಸಲಿಲ್ಲ ;
ಭಾವಿಸಲಿಲ್ಲ, ಭ್ರಾಂತಿಸಲಿಲ್ಲ ;
ಬೆಸಸಲಿಲ್ಲ, ಬೇಸರಿಸಲಿಲ್ಲ ;
ಚಿತ್ತದಲಿ ವಿಷಯವನು ಚಿಂತಿಸಲಿಲ್ಲ.
ಆತ ನಿರಂತರ ನಿಶ್ಚಿಂತನಾಗಿದ್ದ, ನಿರಾಕುಲನಾಗಿದ್ದ ;
ಲಿಂಗ ಯೋಗದಲಿ ಲೀನನಾಗಿದ್ದ, ನಿಜ ಸುಖಿಯಾಗಿದ್ದ.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಆತನಿರ್ದ ಆ ಕುಮಾರಾಶ್ರಮವ ಕೈಲಾಸವಾಗಿಸಿದ್ದ !

೬

ಎನ್ನ ಸಂಸ್ಕಾರದ ಸದನವೆ, ಎನ್ನ ಸಾಹಿತ್ಯದ ಆಶ್ರಯವೆ,
ಎನ್ನ ಆಚಾರದ ಆಗರವೆ, ಎನ್ನ ವಿಚಾರದ ಸಾಗರವೆ ;
ಎನ್ನ ಅನುಭಾವದ ಆಲಯವೆ, ಎನ್ನ ಆನಂದ ರಸಾಬ್ಧಿ ಶಶಿಯೆ ;
ಎನ್ನ ಮನದ ಮಂದಾರವೆ, ಎನ್ನ ಭಾವದ ಭಾಗ್ಯವೆ,
ನೀನೆತ್ತ ಹೋದೆಯಯ್ಯಾ ? ನಿನ್ನಾ ಶಿವ ರೂಹು ಎತ್ತಲಡಗಿರ್ದುದಯ್ಯಾ ?
ನಿನ್ನ ನಿಲುವಿನ ನಿಲುಕಡೆಯನೆನಗೆ ತೋರದೆತ್ತ ನೆರೆದಿ ತಂದೆ ?

ಓ ಗುರುವೆ, ಓ ಪರವೆ, ಓ ಎನ್ನ ಪ್ರಾಣವೆ,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ,
ಅಪ್ಪುಂಡ ಉಪ್ಪಿನಂತಾದೆಯಲ್ಲಾ ಗುರುವೆ !

೭

ಮನೆಯ ಮಮಕಾರವ ಬಿಟ್ಟು, ಮಠವ ಸೇರಿದೆ.
ಮಠವ ಮೋಹವ ಕಳೆದು, ಕುಮಾರಾಶ್ರಮವ ಕಟ್ಟಿದೆ.
ಆಶ್ರಮದ ಆಶೆಯ ಹರಿದು, ಹರನರ್ಚನೆಯಲ್ಲಿ ಹೆರೆ ಹಿಂಗದಿರ್ದೆ.
ಆತ್ಮೋದ್ಧರಣ ಸಾಹಿತ್ಯ ಸಂಗ್ರಹಿಸಿ ಪರಿಷ್ಕರಿಸಿ ಪ್ರಕಟಿಸಿದೆ.
ಪ್ರಾಕೃತಿಕ ಪೂರ್ವಾಶ್ರಯವ ಪರಿಹರಿಸಿ ಪರಮಾರ್ಥವ ಸಂಗಳಿಸಿದೆ.
ಚರಮ ದೇಹಿಯಾಗಿ ಪರಮನೊಳು ಬೆರೆದೇಕವಾದೆಯಲ್ಲಾ !
ನೀನಿಲ್ಲಿಯೂ ಶಿವ, ನಿನಲ್ಲಿಯೂ ಶಿವ ;
ನಿನ್ನನಗಲಿದ ನಮಗೆ ತಪ್ಪದಲ್ಲಾ ಈ ಪರಿಭವ !
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ನಮಗಿನ್ನೆಂದಿಗಹುದೋ ನಿನ್ನ ಸಚ್ಚಿದಾನಂದದ ಅನುಭವ ?

೮

ತವನಿಧಿ ದೇವರ ದಾಸಮಯ್ಯನ ಅನುಭಾವ ಗೋಷ್ಠಿಯಿಂತಲ್ಲ,
ಜಗದ್ಗುರು ರೇವಣ ಸಿದ್ಧರ ಚಂಗಣಿಗಿಲ ಮಂಟಪವಿಂತಲ್ಲ ;
ಭಕ್ತಿ ಭಂಡಾರಿ ಬಸವಣ್ಣನ ಅನುಭವ ಮಂಟಪವಿಂತಲ್ಲ ;
ಕಾರಣಿಕ ಕುಮಾರ ಯೋಗಿಯ ಶಿವಯೋಗ ಮಂದಿರವಿಂತಲ್ಲ ;
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ನಿನ್ನ ಶ್ರೀ ಗುರು ಕುಮಾರಾಶ್ರಮದ ಉದಯದ ಉದ್ದೇಶ-
ಊಹಾತೀತವಯ್ಯ ;
'ಶಿವಾದ್ವೈತ ತತ್ತ್ವ ಪ್ರಚಾರ ಕೇಂದ್ರ' ವಾಗಿ ಕಂಗೊಳಿಸುತಿದೆ
ಉರ ಸೆಜ್ಜೆಯಲಿ ಉಸ್ಪರ ಗುಡಿಯಾಗಿ ಏರಿ ಹಾರಿ ಉಪದೃಷ್ಟವಾಗಿದೆ ;
ನಿನ್ನಾ ಬಳಿಕವೂ ನಿಲವಿನಲಿ ನೆರೆ ನಿಂತಿದೆ.

೯

ಸಮಸ್ತ ಜೀವಾವಳಿಗೆ ಸ್ವಸ್ತಿಯಾಗಲೆಂದು ಮನದಂದು,
ಗಿರಿಯಪುರವ ಪರಿಸರದೊಳಿಹ

ಶ್ರೀಗುರುಕುಮಾರಾಶ್ರಮದ ಹಿರಿಮೆ-- ಗರಿಮೆಗಳ ಉಸುರುವೆ :
ಅಕ್ಕರಿಗರು ಲಕ್ಷ್ಯವಿಟ್ಟು ಆಲಿಸಿ ಆನಂದಿಸುವುದು ;
ಶ್ರೀಗಿರಿಯೆ ಗಿರಿಪುರವಾಗಿ,
ಶ್ರೀಮತ್ಕಲ್ಯಾಣವೆ ಶ್ರೀಗುರುಕುಮಾರಾಶ್ರಮವಾಗಿ,
ಅಜ್ಜಂಪುರದ ಬಳಿ ಉಜ್ಜುಗಿಸಿರ್ಪವಯ್ಯಾ.
ಯುಗಪುರುಷ ಹಾನಗಲ್ ಕಾರಣಿಕ ಕುಮಾರ ಶಿವಯೋಗಿಯೆ,

ಸಕ್ಕರಾಯ ಪಟ್ಟಣದ ಸದಾಶಿವ ಶಿವಾಚಾರ್ಯನಾಗಿ ಅವತರಿಸಿ
ಸಚ್ಚಿದ್ಗುರುವಾಗಿ ಶೀಲ, ಶಿವಪೂಜೆ, ವಚನ, ಕವನ,
ಪದ್ಯ, ಗದ್ಯ, ಭಾಷ್ಯಕರ್ತ್ತರಾಗಿ,
ಶಿವಾದ್ವೈತ ತತ್ತ್ವಕೇಂದ್ರ ಜನಕರಾಗಿ,
'ಯೋಗರವಿ' ಎಂದು, 'ಶೀಲಶಶಿ' ಎಂದು,
'ಭಾಷ್ಯಾಚಾರ್ಯ' ಎಂದು ಹೆಸರಾಂತು ಹೆರೆಹಿಂಗದೆ ಬೆಳಗಿರ್ದರು.

ಗಿರಿಪುರದ ಭಕ್ತ್ತಗಣಂಗಳು ಶೀಲವಂತರು, ಕಲಿಮಲ ವಿರಹಿತರು,
ಶಿವಾಚಾರ ಸಂಪನ್ನರು, ಸಾತ್ವಿಕರು, ಶಿವದೀಕ್ಷಾವಂತರು,
ಶಿವಲಿಂಗಾರ್ಚಕರು, ಸದಾ ಶುದ್ಧ ಕಾಯಕವಂತರು,
ಶಿವಗಣ ದಾಸೋಹಿಗಳು, ಶಿವಪ್ರಸಾದ ಪ್ರೇಮಿಗಳು,
ಶಿವಭಕ್ತ್ತಿಯುಕ್ತ್ತರು, ಶಿವಜ್ಞಾನಿಗಳು, ಶಿವಾನುಭಾವಿಗಳು,
ಶಿವಾದ್ವೈತತತ್ತ್ವ ಜಿಜ್ಞಾಸುಗಳು, ಶಿವಭಾವಿಗಳು ;
ಇಂತಿವರಲ್ಲದೆ ಇನ್ನಾರು ಅಲ್ಲಿಲ್ಲವಯ್ಯಾ ;
ಭವಿಗಳಿಲ್ಲ, ದುರ್ಭಾವಿಗಳಿಲ್ಲ, ದುರಾಚಾರಿಗಳಿಲ್ಲ,
ಆ ಗಿರಿಯಪುರ ಸಿರಿಗನ್ನಡದಲಿ ಅಭಿನವ ಶ್ರೀಗಿರಿಕಂಡಯ್ಯಾ.
ಇಂತಿರ್ಪ ಗಿರಿಪುರದ ಸನಿಹದೊಳಿರ್ಪುದು—

ಓನಗುತ್ತಿ ಒಳ್ಗುತ್ತಿಯಾಗಿ ಓಜಗುತ್ತಿಯಾಗಿ ;
ಶ್ರೀಮರುಳಸಿದ್ಧೇಶ್ವರನ ಸುಕ್ಷೇತ್ರ ತಾನಾಗಿ !
ಆ ಸಿದ್ಧೇಶನ ಸಾನ್ನಿಧ್ಯದಲಿ,
ಶ್ರೀಗುರು-ಲಿಂಗ-ಜಂಗಮ ತ್ರಯ ಸಂಕೇತವಾಗಿ ಸಾಂಸ್ಕೃತಿಕ ನಿಕೇತನವಾಗಿ,
'ಶ್ರೀ-ಗುರು-ಕುಮಾರಾಶ್ರಮ' ನಾಮದಿಂದ ಉತ್ಪತ್ತಿಗೊಂಡಿರ್ಪುದು ನೋಡಿರೆ
ಶಿವಾದ್ವೈತ ತತ್ತ್ವಶ್ರೀಯ ಆಲಯವಾಗಿ !
ಮಂಗಲಕರ ಲಿಂಗಾರ್ಚನ ಮಂಟಪವಾಗಿ !!
ಮರ್ತ್ಯಲೋಕದೊಳ್ ಅಮರ್ತ್ಯಲೋಕವು ತಾನಾಗಿ !!!

ಇಂತುಮಲ್ಲದೆ ಈ ಕಲಿಜನರ ಈ ಶ್ರಮವ ಹರಿಸಿ,
ಆ ಶಮ–ದಮಂಗಳ ಬರಿಸಿ,
ಆಶ್ರಮಾಶ್ರಮವೆಂಬ ಸಾರ್ಥಕವ ನಾಮವುಳ್ಳ ಧಾಮವಾಗಿ ಧವಳಿಸುತ್ತಿಹುದು ;
ಧರ್ಮಿಗಳ್ಳೈತಂದು ದರ್ಶಿಸಿರೇ, ಕರ್ಮ ನಿರ್ಮಳವಹುದು,
ಜನ್ಮಸಾರ್ಥಕವಹುದು ;
ಶ್ರೀನಿಡುಮಾಮಿಡಿ ಶ್ರೀಗಿರಿಸೂರ್ಯ ಸಿಂಹಾಸನಾಧೀಶನಲ್ಲಿ
ಇಂತಿದು ಸತ್ಯಕ್ಕೆ ಸತ್ಯ ಕಾಣಿರೆ !

೧೦

ಸದಾಶಿವ ಶಿವಾಚಾರ್ಯರು ಸದಾಕಾಲ—
ಶಿವಸಂಧಾನದಲಿ ಸುಮ್ಮಾನಿಯಾಗಿರ್ದರು,
ಶಿವಾಚಾರದಲಿ ಸುಯ್ಞಾನಿಯಾಗಿರ್ದರು ;
ಶಿವಭಾವದಲಿ ಸಾವಧಾನಿಯಾಗಿರ್ದರು.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ನೀ ಸಾಕ್ಷಿಯಾಗಿ ಶಿವಜ್ಞಾನಿಯಾಗಿ,
ಶಿವಸಾಹಿತ್ಯದ ಮಹಾದಾನಿಯೆನಿಸಿರ್ದರು.
ಶಿವಾಚಾರ್ಯರೆಂದೆನಿಸಲು ಸಮರ್ಥರಾಗಿರ್ದರು.

೧೧

ಸದಾ ಇಷ್ಟಲಿಂಗ ನಿಷ್ಠರಾಗಿ ತನುಭವಿಯಲ್ಲ,
ಸದಾ ಪ್ರಾಣಲಿಂಗ ಪ್ರತಿಷ್ಠಾಪಿತರಾಗಿ ಮನಭವಿಯಲ್ಲ ;
ಸದಾ ಭಾವಲಿಂಗಾನುಭಾವಿಯಾಗಿ ಭಾವ ಭವಿಯಲ್ಲ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಸದಾ ಪ್ರಸಾದಲಿಂಗದಲಿ ಪ್ರಸನ್ನಾತ್ಮರಾಗಿ ಆತ್ಮಭವಿಯಲ್ಲ.
ಇಂತೀ ಚತುರ್ವಿಧ ಭವಿ ಮುಕ್ತರಾಗಿ,
ಚತುರ್ವಿಧ ಸಾರಾಯ ಸಂಪದಾಸಕ್ತರಾಗಿರ್ದರು ಸದಾಶಿವಶಿವಾಚಾರ್ಯರು.

೧೨

ಶ್ರದ್ಧೆಯುಳ್ಳ ಶೀಲಸಂಪಾದನೆ,
ನಿಷ್ಠೆಯುಳ್ಳ ನಿತ್ಯಾರ್ಚನೆ,
ಸತ್ಯವುಳ್ಳ ಸಾಧನೆ—
ಈ ಮೂರರಲ್ಲಿ ಸದಾಶಿವ ಶಿವಾಚಾರ್ಯರು

ನಿಚ್ಚ ನಚ್ಚು ಮಚ್ಚು ಅಚ್ಚೊತ್ತಿದಂತಿದ್ದಳು ನೋಡಾ,
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ !

೧೩

ಆತನ ಸದ್ಗುರು ಪ್ರಭುಕುಮಾರ ಪಟ್ಟಾಧ್ಯಕ್ಷರು ;
ಆತನ ಚಿದ್ಗುರು ಕಾರಣಿಕ ಕುಮಾರ ಶಿವಯೋಗಿಗಳು ;
ಆತನ ಆನಂದ ಗುರು ಅವಿರಳಾತ್ಮರಾದ ಹಾಲುಸ್ವಾಮಿಗಳು ;
ಶ್ರೀನಿಡು ಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರನಲ್ಲಿ
ಆತನ ಕಾರುಣ್ಯಕ್ಕೆ ತಕ್ಕ ಶಿಷ್ಯರು ಶಿವರುದ್ರಪ್ಪನವರು
ಗುರುದೇವನಿರುವೆ ಶಿಷ್ಯನಿರುವಾಗಿರ್ದರು.

೧೪

ಸದಾ ಶಿವನೊಳಿರ್ದು, ಶಿವಾಚಾರದೊಳಾಳ್ದು,
ಶಿವನೊಡಗೂಡಿ, ಶಿವನೊಡನಾಡಿ,
ಶಿವವನೆ ಬರೆದು, ಶಿವವನೆ ಒರೆದು ;
ಶಿವನೊಡನಾರೋಗಿಸಿ, ಶಿವನೊಡನಾರೋಹಿಸಿ,
ಶಿವಸುಖಿಯಾಗಿ ಶಿವಮುಖಿಯಾಗಿ
ಶಿವ ಮನ, ಶಿವಭಾವ, ಶಿವಜೀವ ತಾವಾಗಿ
ಸತ್ಯ ಶಿವ ಸುಂದರ ಶಿವಾಚಾರ್ಯರಾಗಿರ್ದರು ನೋಡಾ:-
ಸದಾಶಿವಶಿವಾಚಾರ್ಯರು ;
ಶ್ರೀನಿಡುಮಾಮಿಡಿ ಶ್ರೀಗಿರಿಸೂರ್ಯ ಸಿಂಹಾಸನಾಧೀಶ್ವರ !

೧೫

ಹಾಲವಿಡಿದು ಬೆಣ್ಣೆಯನರಸಲುಂಟೆ ?
ಸಕ್ಕರೆವಿಡಿದು ಸಿಹಿಯನರಸಲುಂಟೆ ?
ಸಕ್ಕರೆ ಪಟ್ಟಣದ ಹಾಲುಸ್ವಾಮಿಯನುಳಿದು—
ಶ್ರೀಗುರುವನರಸಲುಂಟೆ ?
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಸದಾಶಿವ ಶಿವಾಚಾರ್ಯರ ವಚನವನುಳಿದು ಸುಧೆಯನರಸಲುಂಟೆ ?

೧೬

ತಾನು ಹಾಲುಸ್ವಾಮಿ,
ತನ್ನ ಊರು ಸಕ್ಕರೆಯಗ್ರಾಮ ;
ತನ್ನದು 'ಸದಾ-ಶಿವ' ಎಂಬ ನಾಮ ;
ತಾನಾದುದು ಸತ್ಯ ಸುಂದರ ಶಿವಾಚಾರ್ಯಧಾಮ.
ತನ್ನಿರುವೆಲ್ಲ ಪರಮಪ್ರಸಾದದ ಪರಿಣಾಮ.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಇಂತಿರಲು,
ಬೇರೆ ಮಹಾ ಮಧುರ ಮಹಂತರ ಬೆದಕಲುಂಟೆ ?

೧೭

ಅಚ್ಚ ಶರಣರು ತೋರಿದ ಅರುವತ್ತುನಾಲ್ಕು ಶೀಲದಲ್ಲಿ
ನಡೆದು ನಿಚ್ಚ ನಲಿದಾತ ನೀನಯ್ಯ.
ಅಚ್ಚು ಮೆಚ್ಚಿನಲಿ ಹಿಡಿದುದನು ಬಿಡದೆ
ದೃಢಮನದೆ ನಡೆಯಿಸಿ ಕಡೆ ಮುಟ್ಟಿಸಿದ ಮೃಡ ನೀನಯ್ಯ.
ಹೆಚ್ಚು ಕುಂದುಗಳನೆಣಿಸದೆ,
ಹಿಂದು ಮುಂದುಗಳೆಂದು ಗಣಿಸದೆ,
ಮೇಲು ಕೀಳೆಂದು ಬಗೆಯದೆ
ಸಮಭಾವಿಯಾಗಿ ಸಮದರ್ಶಿ ಎನಿಸಿದಾತ ನೀನಯ್ಯ,
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಶ್ರೀ ಸದಾಶಿವ ಶಿವಾಚಾರ್ಯನೆ,
ನಿನಗೆ ನಮೋ ನಮೋ ಎಂದು ಭನಗೆಟ್ಟೆನಯ್ಯ.

೧೮

ಶಿವಭಕ್ತಿಯೆ ನಿರ್ವಿಕಾರ ಕಾರಣವೆಂದು,
ಶಿವಭಕ್ತಿಯೆ ನಿಜಸ್ಥೈರ್ಯಧಾರಣವೆಂದು,
ಶಿವಜ್ಞಾನವೆ ನಿಜಾತ್ಮದರ್ಶನ ಸಾಧನವೆಂದು
ಶಿವಾನುಭೂತಿಯೆ ನಿಜಾನಂದ ಪ್ರಮಾಣವೆಂದು
ಸದ್ಗುರು ಸದಾಶಿವ ಶಿವಾಚಾರ್ಯರ ನಿರೂಪಣ ನೋಡಾ,
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಶಿಕ್ಷಾನುಗ್ರಹದಿಂದಲೆ ಭವನಿವಾರಣವೆಂದರುಹಿದರಯ್ಯ.

೧೯

ಸುಖಭೋಗದ ಪರಿಯ ಒಬ್ಬರು ಕಂಡರು,
ಶಿವಯೋಗದ ಗುರಿಯ ಇನ್ನೊಬ್ಬರು ಕಂಡರು ;
ಸುಖಭೋಗಿಯು ಶಿವಯೋಗಿಯ ಮಚ್ಚಿದಾದರು.
ಇವರಿಬ್ಬರೊಂದೆ ತಾಣದವರು, ಒಂದೆ ಅಧ್ಯಯನದೊಳಿದ್ದವರು.
ಇವರುಗಳಲ್ಲಿ ಇದೇಕೆ ಅಂತರಾ ಹೇಳಾ ?
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ
ಸುಖಭೋಗವೆತ್ತ ? ಶಿವಯೋಗವೆತ್ತ ?
ಶಿವಯೋಗವನೆ ಕಯ್ಕೊಂಡು ಶಿವತೇಜಗೊಂಡರು—
ನಮ್ಮ ಸದಾಶಿವ ಶಿವಾಚಾರ್ಯರು.

೨೦

ನಮ್ಮ ಶ್ರೀ ಸದಾಶಿವ ಶಿವಾಚಾರ್ಯವರ್ಯನ
ತನು ಕ್ರಿಯಾಲಿಂಗ ಸಾಹಿತ್ಯ,
ಮನ ಜ್ಞಾನಲಿಂಗ ಸಾಹಿತ್ಯ ;
ಭಾವ ಭಾವಲಿಂಗ ಸಾಹಿತ್ಯ ;
ನಾಸಿಕ ಆಚಾರಲಿಂಗ ಸಾಹಿತ್ಯ, ಜಿಹ್ವೆ ಗುರುಲಿಂಗ ಸಾಹಿತ್ಯ ;
ನೇತ್ರ ಶಿವಲಿಂಗ ಸಾಹಿತ್ಯ, ಪ್ರಾಣ (ತ್ವಕ್) ಚರಲಿಂಗ ಸಾಹಿತ್ಯ ;
ಶ್ರೋತ್ರ ಪ್ರಸಾದಲಿಂಗ ಸಾಹಿತ್ಯ, ಆತ್ಮ ಮಹಾಲಿಂಗ ಸಾಹಿತ್ಯ.
ಸರ್ವಾಚಾರ ಶೀಲವಂತ ನಮ್ಮ ಶ್ರೀಗುರು,
ನಿರಂತರ ನವಲಿಂಗ ಸಾಹಿತ್ಯವಾಗಿರ್ದನಯ್ಯ,
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ.

೨೧

ಸರ್ವಸಂಗ ಪರಿತ್ಯಾಗಿಯಾಗಿರ್ದನಯ್ಯ,
ಸರ್ವಾಧಾರ ಶಿವ ಸಂಯೋಗಿಯಾಗಿರ್ದನಯ್ಯ ;
ಸರ್ವದಾ ಲಿಂಗಭೋಗೋಪಭೋಗಿಯಾಗಿರ್ದನಯ್ಯ,
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರನರಿದಂತೆ
ಸರ್ವಸ್ವವ ಶಿವಾರ್ಪಣವಾಗಿಸಿರ್ದನಯ್ಯ ನಮ್ಮ—
ಸದಾಶಿವ ಶಿವಾಚಾರ್ಯನು. ಇದು ಕಾರಣ,
ಅಂಗದಿಚ್ಛೆಯಂತೆ ನುಡಿಯನು, ನಡೆಯನು.

೨೨

ತನು ಸಯಿದಾನ, ಮನ ಸುಯಿದಾನ ;
ಧನ ಸುಯಿದಾನ, ಚೇತನ ಸುಯಿದಾನ,
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಇಂತು ಸರ್ವಾಂಗ ಸುಯಿದಾನಿ—
ನಮ್ಮ ಸದಾಶಿವದೇವನಯ್ಯ !

೨೩

ಲಿಂಗ ಪ್ರಾಣಿ, ಜಂಗಮ ಪ್ರೇಮಿ,
ಮಂಗಲಮಯ ಶ್ರೀಗುರು ಜೀವಿ—
ನಮ್ಮ ಸದಾಶಿವ ಶ್ರೀಗುರುದೇವ. ನೋಡಾ,
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ !

೨೪

ಶೀಲದ ಕಟ್ಟು ಕಟ್ಟಳೆ ಗುರುವೆ ನಿಮ್ಮದಯ್ಯ :
ಶಿವಪೂಜೆಯ ಕಟ್ಟುಕಟ್ಟಳೆ ಗುರುವೆ ನಿಮ್ಮದಯ್ಯ.
ಸಾತ್ವಿಕ ಶಿವಪ್ರಸಾದದ ಕಟ್ಟುಕಟ್ಟಳೆ ಗುರುವೆ ನಿಮ್ಮದಯ್ಯ.
ಶ್ರೀಗುರುಕುಮಾರಾಶ್ರಮವಾಸದ ಕಟ್ಟು ಕಟ್ಟಳೆ ನಿಮ್ಮದಯ್ಯ.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಶಿವಾದ್ವೈತ ಸಿದ್ಧಾಂತ ಪ್ರಕಾಶನ ಕಟ್ಟು ಕಟ್ಟಳೆ ನಿಮ್ಮದಯ್ಯ.

೨೫

ನಿಮ್ಮಲ್ಲಿದ್ದಿತ್ತು ಸದಾಚಾರ, ನಿಮ್ಮಲ್ಲಿದ್ದಿತ್ತು ಶಿವಾಚಾರ ;
ನಿಮ್ಮಲ್ಲಿದ್ದಿತ್ತು ಲಿಂಗಾಚಾರ, ನಿಮ್ಮಲ್ಲಿದ್ದಿತ್ತು ಗಣಾಚಾರ ;
ನಿಮ್ಮಲ್ಲಿದ್ದಿತ್ತು ಭೃತ್ಯಾಚಾರ ;
ನೀನು ಪಾವನ ಪಂಚಾಚಾರ ಪರಾಯಣ ;
ನಿನ್ನದು ಪಂಚಾಚಾರ ಪ್ರಾಣ ಕಾಣಾ !
ನಿನ್ನ ಅಪಾರ ಆಚಾರ ಸಂಪದವ ಬಲ್ಲ ನಮ್ಮ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನೊಬ್ಬ !

೨೬

ಗುರುವಾದಡಾಗಲಿ, ಚರನಾದಡಾಗಲಿ,
ಪರನಾದಡಾಗಲಿ ಅವನಾದಡಾಗಲಿ

ಶೀಲಾಚರಣೆಯೊಂದಿಲ್ಲದಿದ್ದಡೆ,
ಅವರ ನೋಡೆ, ಅವರೊಡನಾಡೆ ;
ಅವರ ಸಿರಿತನ–ಹಿರಿತನಂಗಳ ಲಕ್ಷ್ಯಕ್ಕೆ ತಾರೆ ನಾಡೆ !
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶನಲ್ಲಿ
ಶೀಲಾಚರಣೆಯೆ ನಿನಗೆ ಪ್ರಾಣವಾಗಿರ್ದ ಕಾರಣವಾಗಿ !

೨೭

ನಿನಗೆ ಕ್ರಿಯಾಶೀಲ ಆಯತವಾಯಿತ್ತು,
ಜ್ಞಾನ ಶೀಲ ಸ್ವಾಯತವಾಯಿತ್ತು ;
ಭಾವ ಶೀಲ ಸನ್ನಹಿತವಾಯಿತ್ತು.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶನಲ್ಲಿ
ನಿನಗೆ ಅನುಭಾವ ಶೀಲ ಅಳವಟ್ಟು ಅವಿರಳವಾಗಿತ್ತು.

೨೮

ಓ ಸದಾಚಾರ ಶೀಲನೆ, ಓ ಶಿವಾಚಾರಶಾಲೀನನೆ,
ನಿನ್ನಲ್ಲಿರಲಿಲ್ಲ ಕಾಮಭವಿ, ಕ್ರೋಧಭವಿ; ಲೋಭಭವಿ ;
ಮೋಹಭವಿ, ಮದಭವಿ, ಮತ್ಸರಭವಿ.
ಇಂತು ಷಡ್ ಭವಿಯ ಕಳೆನುಳಿದು ನಿಂದಾತ ನಮ್ಮ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರನ
ಸದಾಶಿವ ಶಿವಾಚಾರ್ಯನು ಕಂಡಯ್ಯ.

೨೯

ಸದಾಶಿವನೆಂದಡೆ ಶಿವಾಚಾರ್ಯಸ್ವರೂಪನು ;
ಶಿವಾಚಾರ ಸ್ವರೂಪನು ;
ಶಿವಜ್ಯೋತಿ ಸ್ವರೂಪನು.
ಶ್ರೀ ನಿಡುಮಾಮಿಡಿ ಶ್ರೀಗಿರಿಸೂರ್ಯ ಸಿಂಹಾಸನಾಧೀಶ್ವರ,
ಸದಾಶಿವನೆಂದಡೆ ಶ್ರೀಗುರುಕುಮಾರಾಶ್ರಮದ ಚೈತನ್ಯ ಸ್ವರೂಪನು.

೩೦

'ದಯವೆ ಧರ್ಮದ ಮೂಲ' ಎಂಬರು;
ಆಧಾರವಯ್ಯ ನುಡಿಯ ನಡೆಗೆ ತಂದವರಾರು ?

ದ್ವೇಷಿಯ ಕಂಡರೆ ದಯೆಯೂ ಇಲ್ಲ, ಧರ್ಮವೂ ಇಲ್ಲ ;
ನಿರ್ದಯವೆ ನಡೆವರು, ನಿಕೃಷ್ಟದೆ ನಡೆವರು.
ಶತ್ರುವನು ಮಿತ್ರನಂತೆ ಕಾಣುತ್ತಿದ್ದರು,
ನಮ್ಮ ಸದಾಶಿವ ಶಿವಾಚಾರ್ಯರು.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ.

೩೧

ತಮಗೆ ಬೇನೆ ಬಂದಡೆಯೂ
ದಯೆಯ ತೋರುತ್ತಿದ್ದರೆಮ್ಮ ಸದಾಶಿವ ಶಿವಾಚಾರ್ಯರು.
ಮದ್ದ ತಿಂದು ಬಂದ ಬೇನೆಯು ಬಿಟ್ಟೋಡುನಂತೆ
ಮಾಳ್ಪುದು ಅದಾವ ದಯೆ ? ಅದಾವ ಧರ್ಮ ?
ಮನೆಗೆ ಬಂದ ಅತಿಥಿಯ ಹೊರಡೆಂದು ಹೊರಗಟ್ಟುವುದೆ?
ಬಂದಾತ ಇಂದಿಲ್ಲ ನಾಳೆ, ನಾಳೆಯಿಲ್ಲ ನಾಡದ್ದು-
ತಾನೇ ಹೊರಡುವುದಿಲ್ಲವೆ ? - ಎನುತಿರ್ದರಯ್ಯ,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯಸಿಂಹಾಸನಾಧೀಶ್ವರ,
ಇಂತು ಕಾಯಕ್ಕೆ ಬಂದ ಕಾಹಿಲೆ ಮೇಲೆಯೂ
ಕಾರುಣ್ಯ ತೋರುವವರುಂಟೆ ನಮ್ಮ -
ಸದಾಶಿವ ಶ್ರೀಗುರುದೇವನಲ್ಲದೆ ?

೩೨

ನಮ್ಮ ಸದಾಶಿವ ದೇವನಲ್ಲಿ
ಇದ್ದುದಕ್ಕೆ ವಂಚನೆಯಿಲ್ಲ ;
ಇಲ್ಲದುದಕ್ಕೆ ಬೇಡಿ ಕಡನ ತರುತ್ತಿರಲಿಲ್ಲ.
ಪರಧನ - ಪರದೈವಕ್ಕೆಳಸುತ್ತಿರಲಿಲ್ಲ.
ಪರಮತಕ್ಕೆ ಮತ್ಸರಿಸುತ್ತಿರಲಿಲ್ಲ.
ಅದು ಕಾರಣ, ಆತ ಅಚ್ಚಶೀಲಿ, ನಿಚ್ಚಶೀಲಿ ;
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ.

೩೩

ಸದಾಶಿವ, ಶ್ರೀ ಗುರುದೇವನು,
ಅಚ್ಚ ಪ್ರಸಾದಿ, ನಿಚ್ಚ ಪ್ರಸಾದಿ, ಸಮಯ ಪ್ರಸಾದಿಯಲ್ಲದೆ

ಆತ್ಮ ಪ್ರಸಾದಿಯೂ ಆಗಿರ್ದನಯ್ಯ.
ಭಾಂಡ ಭಾಜನ ಹಂಗ ಆತಂಗಿರಲಿಲ್ಲವಯ್ಯ.
ಆತನ ಆ ಕಾಯ ಕರಣಂಗಳೆ ಮಹಾದ್ರವ್ಯಂಗಳಾಗಿ
ಮಹಾ ಲಿಂಗಾರ್ಪಣವಾಗಿರ್ದವಯ್ಯ–ಸಹಜದಲ್ಲಿ ;
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ !

೩೪

ಆತನ ಅಂಗ ಭಾಜನವಲ್ಲ, ಆತ್ಮ ಭಾಜನವಲ್ಲ ;
ಅವೂ ಅರ್ಪಿತ ಪದಾರ್ಥವಾಗಿಪ್ಪವಾಗಿ !
ಆತಂಗೆ ಭಿನ್ನ ಭಾಜನವೆಂಬುದಿರಲಿಲ್ಲ,
ಆ ಶಿವಾದ್ವೈತತತ್ತ್ವ ಸಮನಿಸಿತ್ತಾಗಿ !
ಆತಂಗೆ ಅರ್ಪಣ ಕ್ರಿಯೆಯಿಲ್ಲ ಪಡಿ ಪದಾರ್ಥ ಭಾವವಿಲ್ಲಾಗಿ !
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಸದಾ–ಶಿವನಾದ ಕಾರಣ,
ಭೋಕ್ತೃ ಭೋಗ್ಯ ಭಾವ ಬಯಲಾಯಿತ್ತಾಗಿ !

೩೫

ಸದಾಶಿವ ಶ್ರೀ ಗುರು ದೇವಂಗೆ
ಶಿವಾಚಾರ ಸಿದ್ಧವಾಗಿ ಭಕ್ತಸ್ಥಲ ಬೇರಿಲ್ಲದಾಗಿತ್ತು.
ಶಿವವಿಚಾರ ಸಿದ್ಧವಾಗಿ ಮಾಹೇಶ್ವರ ಸ್ಥಲ ಮಾಣಿತ್ತು.
ಹಸಿವು ತೃಷೆ ಹಿಂಗಿ ಹೋಗಿ ಪ್ರಸಾದಿ ಸ್ಥಲ ನಾಸ್ತಿಯಾಗಿತ್ತು.
ಪ್ರಾಣವೆ ಲಿಂಗವಾಗಿ, ಪ್ರಾಣದ ಪ್ರಕೃತಿ ಹಿಂಗಿ,
ಪ್ರಾಣ ಲಿಂಗಿ ಸ್ಥಲವಿಲ್ಲದಾಗಿತ್ತು.
ನಿಜದರಿವು ಕರಿಗೊಂಡು ನಿಷ್ಪತ್ತಿಗೊಂಡಿತ್ತಾಗಿ,
ಶರಣ ಸ್ಥಲ ಶೂನ್ಯವಾಗಿತ್ತು.
ಶಿವಾದ್ವೈತ ಸ್ಥಲ ಸಮನಿಸಿತ್ತಾಗಿ ಐಕ್ಯ ಸ್ಥಲ ಐಕ್ಯವಾಗಿತ್ತು.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ,
ನಿತ್ಯ ನಿಃಸ್ಥಲಿಯಾಗಿ,
'ಸದಾಶಿವ' ಎಂಬ ನಾಮ ಅನ್ವರ್ಥಕವಾಗಿತ್ತು.

೩೬

ನಿತ್ಯ ಶಿವ, ಸತ್ಯ ಶಿವ ಆದ ಗುರುದೇವಂಗೆ,
ಕ್ರಿಯಾನಿಷ್ಪತ್ತಿ, ಜ್ಞಾನನಿಷ್ಪತ್ತಿ, ಭಾವನಿಷ್ಪತ್ತಿ ಕಂಡಯ್ಯ.
ಕ್ರಿಯಾ ಪ್ರಕಾಶವಾಗಿ ಪಿಂಡಾಕಾಶವ ಬೆಳಗಿರ್ದನು.
ಜ್ಞಾನಪ್ರಕಾಶವಾಗಿ ಬಿಂದ್ವಾಕಾಶವ ಬೆಳಗಿರ್ದನು.
ಭಾವಪ್ರಕಾಶವಾಗಿ ಮಹಾಕಾಶವ ಬೆಳಗಿರ್ದನು.
ಭಾವಾಭಾವಲಯವಾಗಿ ಭಾಂಡಭಾಜನ ಭಾವ ವಿರಹಿತನು.
ಸರ್ವಾರ್ಪಣ ಸಂಪೂರ್ಣವಾಗಿ ಅಂಗ ಲಿಂಗ ಭಾವ ವಿರಹಿತನು.
ವ್ಯಷ್ಟಿ ಸಮಷ್ಟಿ ಭಿನ್ನವಿಲ್ಲವಾಗಿ ಚರಾಚರಭಾವ ವಿರಹಿತನು;
ಸ್ವಯ-ಪರಭೇದ ವಿರಹಿತನು.
ಪಿಂಡಾಂಡವೆ ಬ್ರಹ್ಮಾಂಡವಾಗಿದ್ದಾತನು.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರನೆ-
ಸದಾಶಿವ ಶ್ರೀ ಗುರುದೇವನು.

೩೭

ಪ್ರಭು ಕುಮಾರ ಸದ್ಗುರು ಸದಾಶಿವ ದೇವನ
ಅಂಗಾಂಗವ ನಿಂಬುಗೊಂಡಿದ್ದನು,
ಪರಮ ಚಿತ್ಕಳಾ ಲಿಂಗಯ್ಯನು ಸದಾಶಿವ ದೇವನ
ಮನ ಮತಿಗಳನಿಂಬುಗೊಂಡಿರ್ದನು.
ಪ್ರತಿಯಿಲ್ಲದಿಹ ಹಾಲುಸ್ವಾಮಿ ಜಂಗಮನು ಸದಾಶಿವ ದೇವನ
ಭಾವ ಜೀವಂಗಳನಿಂಬುಗೊಂಡಿದ್ದನು.
ಇದು ಕಾರಣ, ಶ್ರೀ ಸದಾಶಿವ ದೇವನು,
ತಾನೆ ಗುರು, ತಾನೆ ಲಿಂಗ, ತಾನೆ ಜಂಗಮವಾಗಿ
ಏಕ ವಸ್ತುವಾಗಿ ಪರಿಣಮಿಸಿ ಪ್ರಭಾವಿಸಿರ್ದನಯ್ಯ,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ !

೩೮

ಚಿನ್ಮಯ ಮೂರ್ತಿ ಚನ್ನ ಬಸವಣ್ಣನ
ಆಗಮಿಕಾರ್ಚನಾರ್ಪಣ ವಿಧಾನದಂತೆ
ನಮ್ಮ ಸದಾಶಿವ ಗುರುದೇವನು

ನಿಚ್ಚ ನಿಚ್ಚ ಅಚ್ಚ ಮನ ಭಾವಂಗಳಿಂದೆ
ಅಷ್ಟ ವಿಧಾರ್ಚನ ಷೋಡಶೋಪಚಾರವ ಮಾಡಿ,
ಪಡಿ ಪದಾರ್ಥಂಗಳನೆಲ್ಲ ಪ್ರಮಾಣಿನಲ್ಲಿ ಭರಿತಮಾಗಿ ಗಡಣಿಸಿ,
ತನು ಕರಗಿ, ಮನ ಕರಗಿ, ನಿರ್ವಾಣ ನಿಷ್ಪತ್ತಿಯಲ್ಲಿ ಗಟ್ಟಿಗೊಂಡು,
ತಟ್ಟುವ ಮುಟ್ಟುವ ಭೇದದಲ್ಲಿ ಏಕಚಿತ್ತವಾಗಿ,
ಲಿಂಗಾರ್ಪಣವ ನೆಸಗುತ್ತಿರ್ದನು,
ಲಿಂಗ ಪ್ರಸಾದ ಗ್ರಾಹಕನಾಗಿ, ಲಿಂಗ ಪ್ರಸಾದ ಪರಿಣಾಮಿಯಾಗಿ
ಸದಾ ಸುಪ್ರಸನ್ನಾತ್ಮನಾಗಿ, ಸದಾ ಶಿವ ಸ್ವರೂಪನಾಗಿರ್ದನು.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಭೂತಕಾಯ, ಪಂಚೇಂದ್ರಿಯ, ಷಟ್ಕರಣ, ಸಪ್ತ ಧಾತುವಿರಹಿತ
ನಾಗಿದ್ದನು.

೩೯

ಸೂರ್ಯ ಸಿಂಹಾಸನಾಧೀಶ್ವರಾ,
ನಿಮ್ಮಲ್ಲಿ ಭಕ್ತಿಯಿಂದೆ ಬೇಡಿದೆನಾಗಿ,
ಸದಾಶಿವನಂತಪ್ಪ ಶ್ರೀ ಗುರು ಸಿಕ್ಕನೆನಗೆ !
ಸೂರ್ಯ ಸಿಂಹಾಸನಾಧೀಶ್ವರಾ,
ನಿಮ್ಮಲ್ಲಿ ನೆಚ್ಚಿನಿಂದೆ ನಿವೇದಿಸಲಾಗಿ,
ಸದಾಶಿವನಂತಪ್ಪ ಶಿವಾಚಾರ್ಯ ಸಿಕ್ಕನೆನಗೆ !
ಸೂರ್ಯ ಸಿಂಹಾಸನಾಧೀಶ್ವರಾ, ನಿಮ್ಮಲ್ಲಿ ಮೆಚ್ಚಿನಿಂದೆ ಮೊರೆಯಿಟ್ಟನಾಗಿ,
ಸದಾಶಿವನಂತಪ್ಪ ಶೀಲ ಶಶಿ ಸಿಕ್ಕ ನೆನಗೆ !
ಸೂರ್ಯ ಸಿಂಹಾಸನಾಧೀಶ್ವರಾ, ನಿಮ್ಮಲ್ಲಿ ನಿಷ್ಠೆಯಿಂದೆ ನಿವೇದಿಸಿದೆನಾಗಿ,
ಸದಾಶಿವನಂತಪ್ಪ ಯೋಗರವಿ ಸಿಕ್ಕನೆನಗೆ !
ಸೂರ್ಯ ಸಿಂಹಾಸನಾಧೀಶ್ವರಾ,
ನಿಮ್ಮಲ್ಲಿ ಶ್ರದ್ಧೆಯಿಂದೆ ಪ್ರಾರ್ಥಿಸಿದೆನಾಗಿ,
ಸದಾಶಿವನಂತಪ್ಪ ಭಾಷ್ಯಾಚಾರ್ಯ ದೊರಕಿದನೆನಗೆ !
ಸೂರ್ಯ ಸಿಂಹಾಸನಾಧಿಶ್ವರಾ,
ನಿಮ್ಮಲ್ಲಿ ಭಾವಯುಕ್ತನಾಗಿ ಬೇಡಿದೆನಾಗಿ,
ಸದಾಶಿವನಂತಪ್ಪ ಶಿವಾದ್ವೈತಿ ದೊರಕಿದನೆನಗೆ !
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರಾ,
ಸದಾಶಿವನಂತಿಪ್ಪ ಸದಾಶಿವ ಶಿವಾಚಾರ್ಯನು,

ನಿಮ್ಮ ಸೂತ್ರವಿಡಿದು ಅನುಗ್ರಹಿಸಿದನಾಗಿ
ಆನು ನಿಮ್ಮ ಚರಣ ಕಿರಣವಾಗಿಹೆನು.

೪೦

ಕಾಯದೊಳು ಪೂರ್ವಾಶ್ರಯವ ತೋರಿದಾತನೆ ಕಾಯ ದ್ರೋಹಿ.
ವಾಕ್ಕಿನೊಳು ಪೂರ್ವಾಶ್ರಯವ ತೋರಿದಾತನೆ ವಚನ ದ್ರೋಹಿ.
ಮನದೊಳು ಪೂರ್ವಾಶ್ರಯವ ತೋರಿದಾತನೆ ಮನದ ದ್ರೋಹಿ.
ಆತ್ಮನೊಳು ಪೂರ್ವಾಶ್ರಯವ ತೋರಿದಾತನೆ ಆತ್ಮ ದ್ರೋಹಿ.
ಪಾದೋದ ಪ್ರಸಾದದೊಳು ಪೂರ್ವಾಶ್ರಯವ ತೋರಿದಾತನೆ ಪ್ರಸಾದ
ದ್ರೋಹಿ.
ಇಂತೀ ಪಂಚ ಪೂರ್ವಾಶ್ರಯವ ಪರಿಹರಿಸಿದಾತನೆ ನಿರ್ದ್ರೋಹಿ.
ಪರಿಹರಿಸಿ ಪರಶಿವನೊಳು ಪರವಶನಾದಾತ ನಮ್ಮ
ಸದಾಶಿವ ಶ್ರೀ ಗುರು ದೇವನೆ ನಿಜಲಿಂಗ ದೇಹಿ ನೋಡಾ,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ !

೪೧

ಆಚಾರವೆ ಅಂಗವಾಗಿರೆ, ಪಾರ್ಥಿವ ಪೂರ್ವಾಶ್ರಯವುಂಟೆ ?
ಅಂಗವೆ ಲಿಂಗವಾಗಿರೆ, ಆಂಗಿಕ ಪೂರ್ವಾಶ್ರಯವುಂಟೆ ?
ಲಿಂಗ ಸಂಗ ಸಮರಸವಾಗಿರೆ, ಅಂಗ ಭಂಗವಿಲ್ಲ, ಆತ್ಮ ಸಂಗವಿಲ್ಲ.
ಈ ತ್ರಿವಿಧ ನಿರ್ಣಯವ ಶ್ರೀ ನಿ. ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಐಕ್ಯನಾದ ನಮ್ಮ ಸದಾಶಿವ ಶಿವಾಚಾರ್ಯನೆ ಬಲ್ಲ.

೪೨

ಶಿಷ್ಯನಾದಡೆ ಭವಿಯಿಲ್ಲದಿರಬೇಕು.
ಗುರುವಾದಡೆ ಭವವಿಲ್ಲದಿರಬೇಕು.
ಲಿಂಗವಾದಡೆ ಶಿಲಾ ಭಾವವಿಲ್ಲದಿರಬೇಕು.
ಜಂಗಮವಾದಡೆ ಭಾವವಿಲ್ಲದಿರಬೇಕು.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಈ ಚತುರ್ವಿಧ ವಿರಹಿತನು ಸದಾಶಿವ ಗುರು ದೇವನು.

೪೩

ನೀವು ಕೇಳಿರೆ,
ನಮ್ಮ ಸದಾಶಿವ ಶಿವಾಚಾರ್ಯರ ಇರುವಿನ ಪರಿಯನು :
ಶಿಷ್ಯರಿಗೆ ಶಿಷ್ಯನಾಗಿರ್ದ,
ಗುರುಗಳಿಗೆ ಗುರುವಾಗಿರ್ದ,
ಲಿಂಗಕ್ಕೆ ಲಿಂಗವಾಗಿರ್ದ,
ಜಂಗಮರಿಗೆ ಜಂಗಮವಾಗಿರ್ದ ;
ಆಗಿಯೂ ಆಗದಂತಿರ್ದ, ಅರಿತೂ ಅರಿಯದಂತಿರ್ದ ;
ಇದ್ದೂ ಇಲ್ಲದಂತಿರ್ದ ; ನೋಡಿರೆ ;
ನಮ್ಮ ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ !

೪೪

ನಾಡಿನಲಿ ಶ್ರೀ ಗುರು ಕುಮಾರಾಶ್ರಮವ ಕಟ್ಟಿ,
ಶಿವಾದ್ವೈತ ತತ್ತ್ವ ಪ್ರಚಾರವ ಕೈಯ್ಕೊಂಡು,
ಶಿವಾನುಭಾವ ಗೋಷ್ಠಿಯ ನೆಡೆಗೊಂಡು
ಉಭಯ ಕೃಷಿ ಕಾಯಕವ ಮಾಡಿಕೊಂಡು
ತ್ರಿವಿಧ ದಾಸೋಹವನೆರವುತಿರ್ದನಯ್ಯ–
ನಮ್ಮ ಸದಾಶಿವ ಗುರು ದೇವನು.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ ಸಾಕ್ಷಿಯಾಗಿ,
ಮರ್ತ್ಯದ ಮಹಾ ಮಣಿಹವ ಮಾಡಿ, ಮಹಾ ಚೇತನವ ಕೂಡಿ,
ತನ್ನಾ ಚಿಚ್ಚಕ್ಷುವಿನಿಂದೆ
ನಿಚ್ಚ ನೋಡಿ ನೋಡಿ ನಲಿಯುತಿಹನಯ್ಯ.

೪೫

ಆತ ಕಟ್ಟ ಹೋದ ಈ ಮಾಮನೆಯ ವೈಮೆಯನೇನೆಂಬೆನಯ್ಯ ?
ಇಲ್ಲಿಹರು ಆತನ ಹಸ್ತಿಕರು, ಅಚ್ಚ ಪ್ರಸಾದಿಗಳು,
ನಿಚ್ಚ ಪ್ರಸಾದಿಗಳು, ಸಮಯ ಪ್ರಸಾದಿಗಳು.
ಶೀಲ ಬಳಕೆಯವರು, ಲೋಕ ಬಳಕೆಯವರು ;
ಕರಣಿಕರು, ಕಾಯಕವಂತರು, ವಚನ ರಚನಕಾರರು,
ಕಾವ್ಯ ಕವನಕಾರರು, ಪ್ರವಚನ ಪ್ರವೀಣರು,
ಭಾಷಣ ವಿಚಕ್ಷಣರು, ಬರೆಹಗಾರರು, ಬೀರುಗಾರರು

ಪ್ರಾಣ ಲಿಂಗಿಗಳು, ಲಿಂಗ ಪ್ರಾಣಿಗಳು ;
ಶಿವ ಶರಣರು, ಶಿವ ಶರಣೆಯರು ;
ಮಲ್ಲಿಕಾಂಬಾ ಮಂಡಳಿಯವರು, ಮಕ್ಕಳ ಗುಂಪಿನವರು,
ಆಸಕ್ತರು, ಅನಾಸಕ್ತರು ;
ಅಭಿಮಾನಿಗಳು, ನಿರಭಿಮಾನಿಗಳು ;
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ !

೪೬

ಓ ಗುರುವೆ, ಓ ಎನ್ನ ಮನದ ಸುರ ತರುವೆ,
ಓ ಓ ಎನ್ನ ಭಾವದ ಕಾಮಧೇನುವೆ, ಸದಾಶಿವ ದೇವನೆ !
ನಿಮ್ಮ ಕರಸ್ಥಲದಲಿ ಉದಯಿಸಿ, ಉರ ಸ್ಥಲದಲಿ ವರ್ಧಿಸಿ,
ನಿಮ್ಮನು ಶಿರಸ್ಥಲದಲಿ ಧರಿಸಿರ್ಪೆನು.
ನಿಮ್ಮ ನೋಡಿ, ನಿಮ್ಮ ಹಾಡಿ, ಕಣ್ಮನದಣಿಯವು.
ನಿಮ್ಮಿಂದ ಪ್ರಾಣ ಲಿಂಗದ ಪ್ರತಿಭೆಯ ಕಂಡೆ,
ಪ್ರಸಾದವ ಉಂಡೆ, ಮಹಾ ಪರಿಣಾಮವ ಮನಗಂಡೆ ;
ನೀವು ಕರುಣಿಸಿ ಮಾಡಲಾದೆನು ,
ನೀವಿಲ್ಲದಿರೆ ನಾನೆಲ್ಲಿ ? ನಿಮಗಾನು ಸರಿಯೆ ?
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ ಸಾಕ್ಷಿಯಾಗಿ
ನಿಮ್ಮ ಕರುಣೆಯ ಕಂದನ
ಕೈಬಿಡದಿರಯ್ಯ ಕಾಲಾನುಕಾಲಕ್ಕೆ !

೪೭

ಸದಾಶಿವ ಸದ್ಗುರು ವರನೆ,
ನಿನ್ನ ಆಚಾರ, ಅರ್ಚನ, ವಿಚಾರ, ಅರ್ಪಣಂಗಳ—
ಏನೆಂದು ಬಣ್ಣಿಸುವೆನಯ್ಯಾ ?
ಭಾವಿಸಲು ಭಾವವದು ಬಡವ.
ನುಡಿಯಲು ನಾಲಗೆಗೆ ಕಲಿತನವಿಲ್ಲ.
ಆಚಾರವೆ ಅಂಗವಾಗಿ, ಕ್ರಿಯೆಯೆ ಇಷ್ಟ ಲಿಂಗವಾಗಿ,
ಆ ಇಷ್ಟ ಲಿಂಗದಲ್ಲಿ ದೃಷ್ಟಿ ಮನ ಭಾವಂಗಳು ನಟ್ಟು,
ಅರ್ಚನದಲ್ಲಿ ಅವಿರಳತೆಯ ತಳೆವ ನಿಮ್ಮ ಘನವ ನಾನೆತ್ತ ಬಲ್ಲೆನಯ್ಯಾ ?
ಅರ್ಪಣದಲ್ಲಿ ಅಂಗ ಭಾವಕ್ಕಿಂಬಿಲ್ಲದಿಹ ನಿಮ್ಮ
ಮನ ಸಂಯಮನ ಘನವ ನಾನೆತ್ತ ಬಲ್ಲೆನಯ್ಯಾ ?
ಅವಿರಳಾನುಭವನ ಅಂತರಂಗದಲ್ಲಿ ಅಳವಡಿಸಿಕೊಂಡು,

ಪ್ರಸಾದಲಿಂಗದಲ್ಲಿ ಪ್ರಸನ್ನನಾಗಿರ್ಪ ನಿಮ್ಮ
ಪ್ರಭಾವವ ನಾನೆತ್ತ ಬಲ್ಲೆನಯ್ಯಾ ?
ಕ್ರಿಯಾಲಿಂಗದಲ್ಲಿ ಕರಿಗೊಂಡು,
ಪ್ರಾಣಲಿಂಗದಲ್ಲಿ ಪರಿಣಾಮಿಯಾಗಿ,
ಭಾವಲಿಂಗದಲ್ಲಿ ಬೆರೆದೇಕವಾದ ನಿಮ್ಮ
ನಿಬ್ಬೆರಗನು ನಾನೆತ್ತ ಬಲ್ಲೆನಯ್ಯಾ ?
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ ಸಾಕ್ಷಿಯಾಗಿ
ನಿಮ್ಮ ಅಪ್ರತಿಮ ಪ್ರತಿಭೆಯ ಅಣು ಕಿರಣ ನಾನಯ್ಯ !

೪೮

ಗುರು–ಲಿಂಗ–ಜಂಗಮವೆಂಬ ಬಿರುಕನು ತೊಲಗಿಸಿ,
ಒಂದೆ ಎಂದು ತೋರಿದಾತ ನೀನಯ್ಯ.
ಪಂಚಸೂತ್ರದ ಲಿಂಗಂಗಳ, ಮಂತ್ರಸಂಸ್ಕಾರದ ಭಸ್ಮಂಗಳ,
ಲಿಂಗಾಂಗಿಗಳಿಗೆ ಒದಗಿಸಿದಾತ ನೀನಯ್ಯ.
ಅರ್ಚನ, ಅಯ್ಯತನ, ಪಟ್ಟಾಭಿಷೇಕ, ರುದ್ರಾಭಿಷೇಕ,
ಅನುಗ್ರಹ, ನಿರ್ವಾಣ ವಿಧಿವಿಧಾನಂಗಳ ಕರುಣಿಸಿದಾತ ನೀನಯ್ಯ.
ಶ್ರೀ ಸದಾಶಿವ ಶ್ರೀ ಗುರುದೇವ ,
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಸಾಮಾಜಿಕ ಸುಧಾರಣೆಯೆ ನಿನ್ನ ಜೀವನ ಗುರಿಯಯ್ಯ.

೪೯

ಜನ ಮನ ಸಂತಸಕ್ಕಾಗಿ ಮಠದ ಪಟ್ಟಾಧಿಕಾರವ ವಹಿಸಿದ,
ಮನ ಘನ ಸಂತಸಕ್ಕಾಗಿ ಶ್ರೀ ಗುರು ಕುಮಾರಾಶ್ರಮವ ಕಟ್ಟಿದ ;
ಘನ ಮನ ಸಂಪಾದನೆಗಾಗಿ ಶಿವಾದ್ವೈತ ತತ್ತ್ವವ ಮುಟ್ಟಿದ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಶ್ರೀ ಸದಾಶಿವ ಗುರುದೇವ ತಾನಾದ !

೫೦

ನಿತ್ಯ ಸಾಧಕನಾಗಿ ಸತ್ಯ ಸಿದ್ಧಿಗೇರಿಹ –
ಸದಾಶಿವ ಶಿವಾಚಾರ್ಯನು ಸತ್ ಶಶಿ, ಚಿದ್ರವಿ ;
ಆತನಿಂದೆ ನಿಚ ನಿಚ್ಚ ಹುಣ್ಣಿಮೆ ;

ಅಚ್ಚ ಅಚ್ಚ ಹಗಲು. ಕಿಂಚಿದಿರುಳೆಂಬುದಿಲ್ಲ,
ಆತ ಕಳಂಕವಿಲ್ಲದ ಶಶಾಂಕ ; ಬಿಸಿಯಿಲ್ಲದ ನೇಸರ.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಆತನಿಗಿಲ್ಲ ಕಾಲಬಂಧ, ಕರ್ಮಬಂಧ, ಮಾಯಾಬಂಧ.

೫೧

ಎನ್ನ ಸದಾಶಿವ ಗುರುದೇವನು,
ಗಂಧವನರ್ಪಿಸಿ ವಾಸನೆಯನಳಿದ ವಶಿ.
ರುಚಿಯನರ್ಪಿಸಿ ರುಚಿಗೆಳಸದ ಋಷಿ.
ರೂಪವನರ್ಪಿಸಿ ರೂಪಕೆ ಮೋಹಿಸದ ಪ್ರಸಾದಿ.
ಸ್ಪರ್ಶವನರ್ಪಿಸಿ ಸ್ಪರ್ಶಸುಖಕೆ ಸೂರೆವೋಗದ ಸುಯ್ಜ್ಞಾನಿ.
ಶಬ್ದವನರ್ಪಿಸಿ ಶಬ್ದಸೂತಕಿಯಾಗದ ನಿಶ್ಶಬ್ದಬ್ರಹ್ಮಿ.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ತನ್ನನರ್ಪಿಸಿ ತಾನೆಂಬುದಿಲ್ಲದ ತದೈಕ್ಯಭಾವಿ !

೫೨

ಕರದೊಳಗೆ ತೆರಹಿಲ್ಲದ ಕುರುಹು.
ಉರದೊಳಗೆ ಕುರುಹಿಲ್ಲದ ಸುಳುಹು.
ಶಿರದೊಳಗೆ ಸುಳುಹಿಲ್ಲದ ಹೊಳಹು.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಸದಾಶಿವ ಸದ್ಗುರುವಿಂಗೆ !

೫೩

ಕಾಮಿಸಿ ಅರ್ಪಿಸಲಿಲ್ಲ, ಅರ್ಪಿಸಿ ಕಾಮಿಸಲಿಲ್ಲ.
ಕಲ್ಪಿಸಿ ನುಡಿಯಲಿಲ್ಲ, ವಿಕಲ್ಪಿಸಿ ನಡೆಯಲಿಲ್ಲ.
ಕಾಯಕ್ಕೆಂದು ಬಯಸಲಿಲ್ಲ, ಬಯಕೆಗೆಂದು ಬೇಡಲಿಲ್ಲ.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಸದಾ–ಶಿವನಿಗಾಗಿ ಸದಾಶಿವ ತಾನಿದ್ದಾನಲ್ಲಾ !

೫೪

ತನ್ನ ಅಂತರಂಗದಲ್ಲಿ ಚಿದ್ಗುರು ಕುಮಾರೇಶನಿರ್ದ್ದ ;
ತನ್ನ ಬಹಿರಂಗದಲ್ಲಿ ಸದಾಚಾರವನೊಳಕೊಂಡಿರ್ದ್ದ ;

ತನ್ನ ಉಭಯಾಂಗದಲ್ಲಿ ಆನಂದ ಚೈತನ್ಯವನೊಳಕೊಂಡಿರ್ದ–
ನಮ್ಮ ಸದಾಶಿವ ಗುರುದೇವನು
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರಕರಕಂಜಾತನ
ತನ್ನ ಅಪಾಂಗದಲ್ಲಿರಿಸಿಕೊಂಡಿರ್ದ !

೫೫

ಭಕ್ತಿ ವೃಕ್ಷಕ್ಕೆ ಕ್ರಿಯೆಯೆ ಎಲೆ, ಜ್ಞಾನವೆ ಹೂವು,
ಅವಧಾನವೆ ಮಿಡಿ, ಅನುಭವವೆ ಹಣ್ಣು ;
ಅನುಭವ ಫಲವಿಲ್ಲದ ಭಕ್ತಿವೃಕ್ಷ ಗೊಡ್ಡು ಮರವೆನಿಸಿತ್ತು.
ಎಲೆ ಹೂವೆಂಬ ಕ್ರಿಯಾಜ್ಞಾನ ಏತಕ್ಕೂ ಬಾರವು.
ಮಿಡಿಯಂತಿರ್ದ ಅವಧಾನಕ್ಕೆ ಅರ್ಥ ವಿಲ್ಲದಾಯಿತ್ತು ;
ಪಕ್ವರಸವಿಲ್ಲದಾಯಿತ್ತು.
ಇದನರಿದು ನಮ್ಮ ಸದಾಶಿವ ಗುರುದೇವನು,
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಅನುಪಮ ಅನುಭಾವಿಯಾಗಿರ್ದನು.

೫೬

ನಮ್ಮ ಸದಾಶಿವ ಗುರುದೇವನಲ್ಲಿ
ಅನುಭವವೆಂಬುದು ನೆಲದ ಮರೆಯನಿಧಾನದಂತಿತ್ತು.
ಫಲದ ಮರೆಯ ರುಚಿಯಂತಿತ್ತು.
ಕೂಸುಕಂಡ ಕನಸಿನಂತಿತ್ತು.
ಅನ್ಯರಂತೆ ಆತನಲ್ಲಿ ಅನುಭವವೆಂಬುದು,
ರಚ್ಚೆಯ ಮಾತಾಗಿರಲಿಲ್ಲ, ಸಂತೆಯ ಸುದ್ದಿಯಾಗಿರಲಿಲ್ಲ ;
ಅಂತರಂಗದ ಅವಿರಳ ಪರಂಜ್ಯೋತಿಯಾಗಿತ್ತು ;
ಅಚ್ಚಗನ್ನಡಿಯಲ್ಲಡಗಿದ ಆಗಸದಂತೆ ಅಪಾರವಾಗಿತ್ತು.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ನಮ್ಮ ಸದಾಶಿವದೇವನು ಕಂಡ ಕಂಡಲ್ಲಿ
ಅನುಭಾವಗೋಷ್ಠಿಯನೆಸಗದಂತಿದ್ದನು ;
ಮನಗಂಡಲ್ಲಿ ಮನದೆರೆದು ಉಸರಲುಸಿದ್ಧನಿದ್ದನು.

೫೭

ಶ್ರೀ ಶಿವಾಚಾರ್ಯರ ನಡೆ ಲಿಂಗದ ನಡೆ ,
ನುಡಿ ಲಿಂಗದ ನುಡಿ ;

ತಮ್ಮ ಸ್ವಾನುಭಾವಕ್ಕೆ ಸಲ್ಲುವ ಶ್ರುತಿಯ ತೋರಿ ನುಡಿಯುತ್ತಿರ್ದರು ;
ಇಲ್ಲವಾದಡೆ ದೃಷ್ಟವ ತೋರಿ ನಿರೂಪಿಸುತ್ತಿದ್ದರು.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಚಿನ್ಮಯ ಚನ್ನಬಸವಣ್ಣನಂತೆ,
ಶ್ರುತ್ಯಾಗಮ ಪ್ರಮಾಣಗಳ ನೆರೆನಂಬಿರ್ದನು.
ಪ್ರಮಾಣವಿಲ್ಲದ ವಚನ ವರ್ತನಂಗಳನಂಗೀಕರಿಸದಂತಿರ್ದನು.

೫೮

ಸದಾಶಿವಶಿವಾಚಾರ್ಯನು ಸಂಪ್ರದಾಯ ಶರಣನಲ್ಲ ;
ಪೂರ್ವ ಪ್ರಮಾಣಂಗಳನಾದಡೆಯೂ ಪ್ರಮಾಣಿಸಿ ನೋಡುತ್ತಿರ್ದನು ;
ಸರಿಗಂಡಡೆ ಪರಮಹರ್ಷದಿಂದೆ ಪರಿವರ್ತಿಸುತ್ತಿದ್ದನು.
ಸರಿಗಾಣದಿರೆ ನಿರಾಕರಿಸುತ್ತಿರ್ದನು ಕಂಡಯ್ಯ
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಸ್ವಾನುಭವ ಸ್ವಾತಂತ್ರ್ಯ ಸಂಪನ್ನನಾಗಿರ್ದನು.

೫೯

ಆಚಾರವಿಲ್ಲದವರ, ಅನುಭಾವವಿಲ್ಲದವರ ಕಂಡರೆ,
ಕಾಷಾಯಾಂಬರವ ಹೊದ್ದಿದ್ದಡೆಯೂ
ಭಾಷಾಕೋವಿದರಾಗಿದ್ದಡೆಯೂ ಭಾಗ್ಯವಂತರೆನಿಸಿದ್ದಡೆಯೂ
ಅವರನೆನಿತೂ ಎಂತೂ ಮೆಚ್ಚ ;
ಅವರೊಡನೆನೆ ಬಿಚ್ಚಿ ಮಾತಾನಾಡ ನೋಡಾ—
ನಮ್ಮ ಸದಾಶಿವ ಶಿವಾಚಾರ್ಯನು.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಆತ ಆಚಾರಪ್ರೇಮಿ, ಅನುಭಾವ ಪ್ರಾಣಿ ಕಾಣಾ !

೬೦

ಮಾತಾನಾಡಬಲ್ಲವನಾದಡೇನು ?
ಗೀತಹಾಡ ಬಲ್ಲವನಾದಡೇನು ?
ಶ್ರುತಿ ಸ್ಮೃತಿಗಳ ನೋಡಿ ತಿಳಿದವನಾದಡೇನು ?
ಭೂತ ವಿಕೃತಿಯ ಬಿಡದ, ಭಾವ ಭ್ರಾಂತಿಯಳಿಯದ
ಪ್ರಾಕೃತರ ಮೆಚ್ಚನು ;

ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಅದುವೆ ಜ್ಯೋತಿರ್ಲಿಂಗಾನುಭಾವಿಗಳ ಕಂಡಡೆ
ಅವಂದಿರ ಅಡಿಯಾಳಾಗುತ್ತಿರ್ದನು ;
ಮನ ಮೆಚ್ಚಿ ಹೆಚ್ಚಿ ಅವರೊಳಿಗವನನೆಸಗುತ್ತಿರ್ದನು–ನಮ್ಮ
ಸದಾಶಿವ ಶಿವಾಚಾರ್ಯನು ದೇವರದಾಸನಂತೆ,
ಜಗದ್ಗುರು ರೇವಣಸಿದ್ಧರಂತೆ, ಬಸವ–ಚನ್ನಬಸವರಂತೆ !

೬೧

ಎನಿತೋ ಶ್ರೀಗಳಕಂಡೆ, ಸ್ವಾಮಿಗಳ ಕಂಡೆ !
ನಿರಂಜನ ನಿರಾಭಾರಿಯೆಂದೆನಿಸಿ ಕೊಂಡವರ ಕಂಡೆ ;
ಗುರುಗಳ ಕಂಡೆ, ಜಗದ್ಗುರುಗಳ ಕಂಡೆ.
ಘನಲಿಂಗ ಚಕ್ರವರ್ತಿಗಳೆನಿಸಿಕೊಂಡವರ ಕಂಡೆ.
ಯೋಗಿಗಳ ಕಂಡೆ, ಶಿವಯೋಗಿಗಳ ಕಂಡೆ :
ಗವಿ–ಓವರಿಗಳಲಿದ್ದು ತಪಸ್ವಿಗಳೆನಿಸಿಕೊಂಡವರ ಕಂಡೆ.
ಸಾಹಿತಿಗಳ ಕಂಡೆ, ಶ್ರೀಮಂತರ ಕಂಡೆ ; ಧೀಮಂತರ ಕಂಡೆ,
ಕವನಂಗಳ ಕಟ್ಟಿ ಕವಿಗಳೆನಿಸಿಕೊಂಬವರ ಕಂಡೆ.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಸದಾಶಿವ ಶಿವಾಚಾರ್ಯರಂತಹ ಶ್ರೀಗಳ ಕಾಣೆ, ಶ್ರೀಗುರುಗಳ ಕಾಣೆ ;
ಯೋಗಿ ಶಿವಯೋಗಿಗಳ ಕಾಣೆ ;
ತಪಸ್ವಿ ತೇಜಸ್ವಿಗಳ ಕಾಣೆ ;
ಸಾಹಿತಿ ಸುಮತಿಗಳ ಕಾಣೆ ; ಸಟೆಯಲ್ಲ, ಸ್ವಾಂತರಾತ್ಮನ ಆಣೆ !

೬೨

ಉಪ್ಪಿನ ಹಂಗಿಗನಲ್ಲ, ಅಪ್ಪುವಿನ ಹಂಬಲಿಗನಲ್ಲ ;
ಸಕ್ಕರೆಯ ಮೆದ್ದವನಲ್ಲ , ಅಕ್ಕರಿಗನಲ್ಲ ಊಟೋಪಚಾರಕ್ಕೆ !
ತೊಗರೆ ಬೇಳೆಯವನಲ್ಲ , ಅವರೆ ಹಲಸಂದೆಗಳ ಮಾತೆಲ್ಲಿ ?
ಎಮ್ಮೆವಾಲಿಗೆ ಹಮ್ಮೈಸುವವನಲ್ಲ ಹಸುವಿನ ಹಾಲಿಗಲ್ಲದೆ !
ರಾಜಸ ತಾಮಸಾಹಾರಂಗಳ ಸೋಂಕಿದಾತನಲ್ಲ,
ಸಾತ್ವಿಕಾಹಾರವ ಹಿತಮಿತವಲ್ಲದೆ
ಸಾತಿಶಯವಾಗಿ ತೆಗೆದುಕೊಂಡಾತನಲ್ಲ.
ಎಣ್ಣೆ ಏಲಕ್ಕಿ ಮೆಣಸು ಬೆಳ್ಳೊಳ್ಳಿಗಳ

ಮರೆತಾದಡೆಯೂ ಮುಟ್ಟದಾತನಲ್ಲ.
ಕರಿದ ಪದಾರ್ಥಂಗಳ ಕನಸಿನಲ್ಲಿಯೂ ಕಂಡವನಲ್ಲ.
ಸದಾಶಿವ ಶ್ರೀಗುರು ಯೋಗಿಯಲ್ಲದೆ ಭೋಗಿಯಲ್ಲ ನೋಡಾ,
ಶ್ರೀ ನಿಡುಮಾಮಿಡಿ ಶ್ರೀಗಿರಿಸೂರ್ಯ ಸಿಂಹಾಸನಾಧೀಶ್ವರ,
ಲಿಂಗ ಸುಖಿಯಲ್ಲದೆ ಅಂಗಸುಖಿಯಲ್ಲ.

೬೩

ಗಿರಿಪುರದ ಪರಿಸರದ ವೀರಶೈವದ
ಪುನರುತ್ಥಾನದ ಪ್ರಭಾವ ಶಾಲಿಯಾಗಿ ಪ್ರಾರಂಭಿಸಿ
ಪ್ರರೂಢಿಸಿದ ಪ್ರತಿಭೆ ಸದಾಶಿವ ಶಿವಾಚಾರ್ಯನದಯ್ಯ.
ಶಿವಾಚಾರ ಶಿವ ವಿಚಾರಂಗಳ ಬಿತ್ತಿ ಬೆಳೆದನಯ್ಯ—
ಮನೆ ಮನೆಯಲ್ಲಿ ಮನಮನಂಗಳಲ್ಲಿ !
ಶಿವಾದ್ವೈತವೆಂಬ ಸುರತರು ಸುಳಿದೆಗೆದು ಬೆಳೆದು
ಫಲಪದಂಗಳನೀವು ತಿಹುದು ನೋಡಾ,
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ !

೬೪

ಮಠಸಾಧಕರು ನೂರಕ್ಕೆ ನೂರು ;
ಘಟ ಸಾಧಕರು ನೂರಕ್ಕೆ ನೂರು ;
ಹಟ ಚಟ ಸಾಧಕರು ನೂರಕ್ಕೆ ನೂರು.
ದ್ರವಿಣ, ಪೀಠಾಸನ, ಕಿರೀಟ ಸಂಪಾದಕರು ನೂರಕ್ಕೆ ನೂರು.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯಸಿಂಹಾಸನಾಧೀಶ್ವರ,
ಸದಾಶಿವ ಶಿವಚಾರ್ಯರಂತೆ
ನಿಮ್ಮ ಸಾಧಿಸುವವರ ಕಾಣೆ ;
ಸಾಸಿರಕ್ಕಿವರೊಬ್ಬರೆ !

೬೫

ನಾವು ಶ್ರೀಗುರುಗಳು, ನಾವು ಶಿವಾಚಾರ್ಯರು ಎಂಬರು,
ಅರಿವಿನ ಹಸನಾದ ಹೊಲಬನರಿಯರು ;
ಅನುಭವದ ಅಣಿಯರದ ನಿರ್ಣಯವನರಿಯರು ;

ಆಚಾರಾವಧಾನಿಗಳಾಗಿರರು.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ,
ನಮ್ಮ ಸದಾಶಿವ ಗುರುದೇವನಂತೆ
ಒಳಗಣ ಸುದ್ದಿಯ ನರಿಯರು ;
ಆತ್ಮಸ್ತುತಿ ಪರರು ಆತ್ಮವ ಬಲ್ಲರೆ ?

೬೬

ದೇಹದ ಮೇಲೆ ಲಿಂಗವಿದ್ದವರು ಸಾಸಿರ ಸಾಸಿರ ;
ಅಂಗದ ಮೇಲೆ ಲಿಂಗವಿದ್ದವರು ಅಪೂರ್ವ.
ಅಂಗದ ಮೇಲೆ ಲಿಂಗವಿದ್ದವರು ನೂರು ನೂರು ;
ಅಂತರಂಗದ ಮೇಲೆ ಲಿಂಗವಿದ್ದವರು ಅಪೂರ್ವ,
ಅಂತರಂಗದ ಮೇಲೆ ಲಿಂಗವಿದ್ದವರು ಮೂರು ಮೂವರು ಮಾತ್ರ ;
ಅಂತರಂಗವು ಲಿಂಗದಲ್ಲಿ ಅವಿರಳವಾದವರು ಅಪೂರ್ವ ;
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ,
ನಿಮ್ಮ ಸದಾಶಿವ ಶಿವಾಚಾರ್ಯರಲ್ಲದೆ ಬೇರೊಬ್ಬರ ಕಾಣೆ !

೬೭

ಕಾಯ ವಂಚಕರ ಕಂಡೆ ಕರಣ ವಂಚಕರ ಕಂಡೆ ;
ಭಾವ ವಂಚಕರ ಕಂಡೆ, ಜೀವ ವಂಚಕರ ಕಂಡೆ ;
ಕಾಲ ವಂಚಕರ ಕಂಡೆ, ಕರ್ಮ ವಂಚಕರ ಕಂಡೆ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ನಮ್ಮ ಸದಾಶಿವ ಗುರುದೇವ ಕಾಯ ಕರಣ ವಂಚಕನಲ್ಲ,
ಭಾವ ಜೀವ ವಂಚಕನಲ್ಲ ; ಕಾಲಕರ್ಮ ವಂಚಕನಲ್ಲ ;
ಸಾಮಾಜಿಕ ವಂಚಕ ಮುನ್ನಲ್ಲ ಕಂಡಯ್ಯ.

೬೮

ಅಷ್ಟ ಮದಂಗಳಿಗೊಳಗಾಗಿ ಕಷ್ಟಕ್ಕೊಳಗಾಗುವವನಲ್ಲ ನೋಡಾ—
ನಮ್ಮ ಮೃದು ಹೃದಯದ ಸದಾಶಿವ ದೇವನು.
ಪಾರ್ಥಿವ ಮದವಿಲ್ಲಾಗಿ ತನುಗುಣವಿರಹಿತ.
ಸ್ಥಾಲಿಲ ಮದವಿಲ್ಲಾಗಿ ಸಂಸಾರವಿರಹಿತ

ತೈಜಸಮದವಿಲ್ಲಾಗಿ ಕಾಮ್ಯರಸ ವಿರಹಿತ.
ವಾಯವೀಯ ಮದವಿಲ್ಲಾಗಿ ಚಾಂಚಲ್ಯ ವಿರಹಿತ .
ವ್ಯೋಮ ಮದವಿಲ್ಲಾಗಿ ಅಜ್ಞಾನ ವಿಕೃತಿ ವಿರಹಿತ.
ಸೌರ್ಯಮದವಿಲ್ಲಾಗಿ ಕ್ರೋಧ ವಿರಹಿತ
ಚಾಂದ್ರಮದವಿಲ್ಲಾಗಿ ಕಲಂಕ ವಿರಹಿತ.
ಆತ್ಮ ಮದವಿಲ್ಲಾಗಿ ಅಹಂಕಾರ ವಿರಹಿತ.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಮದವಳಿದು ಮದುತನವುಳಿದು ಹೃದಯಿಯಾಗಿರ್ದ ;
ಮಹಾ ಜ್ಞಾನಿಯಾಗಿರ್ದನಯ್ಯ.

೬೯

ತನು ವ್ಯಸನವಳಿದ ತೇಜೋವಂತ ;
ಮನ ವ್ಯಸನವಳಿದ ನಿಶ್ಚಿಂತ ;
ಧನ ವ್ಯಸನವಳಿದ ತ್ಯಾಗವಂತ ;
ಭೋಗ ವ್ಯಸನವಳಿದ ಯೋಗವಂತ ;
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ ,
ಮತಮಾನ್ಯಂಗಳ ವ್ಯಸನವಳಿದ ಮಹಂತ ,
ಮರ್ತ್ಯದ ವ್ಯಸನವಳಿದ ಮಹಾ ಮತಿವಂತ ,
ನಮ್ಮ ನಿರ್ವ್ಯಸನಿ ಸದಾಶಿವ ಸಚ್ಚಿದ್ ಘನವಂತ !

೭೦

ಶ್ರೀ ಜ. ಚ. ನಿ ಯ ಅಂತರಂಗ ಸದಾಶಿವ ಗುರುದೇವ .
ಶ್ರೀ ಸದಾಶಿವ ಗುರುದೇವನ ಬಹಿರಂಗ ಶ್ರೀ .ಜ .ಚ .ನಿ .
ಅಂತರಂಗದ ಸುದ್ದಿಯ ಬಹಿರಂಗವೆತ್ತ ಬಲ್ಲುದಯ್ಯ .
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ ?
ಅಂತರಂಗವಿಲ್ಲದೆ ಬಹಿರಂಗ ಬಾಳಬಲ್ಲುದೇನಯ್ಯಾ ?

೭೧

ಶೀಲ ಸೌಜನ್ಯ ಅಳವಟ್ಟಿರ್ದಡೆಯು,
ಅರ್ಚನ ಅರ್ಪಣ ಅಳವಟ್ಟಿರ್ದಡೆಯು ,
ಅರಿವು-ಅನುಭವ ಅಳವಟ್ಟಿರ್ದಡೆಯು

ಅಹಂಕಾರ–ಅಭಿಮಾನ ವಿರಹಿತರಾಗಿರುವವರಾರಯ್ಯ—
ನಮ್ಮ ಸದಾಶಿವ ಶಿವಾಚಾರ್ಯನಲ್ಲದೆ !
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಅವರು ನಿರಹಂಕಾರಿ , ನಿರಭಿಮಾನಿಗಳೆಂಬುದನು
ಕರಿನಾಡೆಲ್ಲ ಅರಿತಿಹುದಯ್ಯ.

೭೨

ವಾಸ್ತವವಾಗಿ ಅಳವಡಿಸಿಕೊಂಡು ಅನುಭವದ ನಿರ್ಣಯದಲ್ಲಿ
ನಿರಂಜನ, ನಿರಾಭಾರಿ, ಪ್ರಣವಸ್ವರೂಪಿ ಎಂದು
ಹೇಳಿಕೊಂಬವರಿರುವರೇನಯ್ಯ ?
ಇರುವವರ ನಾ ಕಾಣೆ !
ನಮ್ಮ ಸದಾಶಿವ ಶಿವಾಚಾರ್ಯನು
ನಿತ್ಯಕ್ಕೂ ರಂಜನರಹಿತನಾಗಿದ್ದ, ಅಂಜನವಿಲ್ಲದಂತಿದ್ದ ;
ಸತ್ಯಕ್ಕೂ ಭಾರವಿಲ್ಲದಂತಿದ್ದ, ಆಭಾರವಿಲ್ಲದಂತಿದ್ದ .
ಪ್ರಮಾಣಕ್ಕೂ ಪ್ರಣವಪ್ರಾಣಿಯಾಗಿದ್ದ ,ಪ್ರಾಣ ಪ್ರಣವವಾಗಿದ್ದ
ನೋಡಾ,
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ !

೭೩

ಪ್ರಣವವೆ ಬಸಿರು ; ಪ್ರಣವವೆ ಉಸಿರು ;
ಪ್ರಣವವೆ ಕುರುಹು, ಪ್ರಣವವೆ ಅರುಹು ;
ಪ್ರಣವವೆ ನನಸು , ಪ್ರಣವವೆ ಕನಸು ,
ಪ್ರಣವವೆ ಮನಸು, ಪ್ರಣವವೆ ಸೊಗಸು—
ತಾನಾಗಿದ್ದ ನಮ್ಮ ಸದಾಶಿವಾಚಾರ್ಯನು ;
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ ,
ಅವರ ಪೂಜೆ ಪ್ರಣವನಾದ, ಪ್ರಣವಬಿಂದು,
ಪ್ರಣವ ಕಲೆಗಳಿಂದೊಡಗೂಡಿ ಪ್ರಣವ ಸ್ವರೂಪವೆ ಆಗಿ,
ಪ್ರಣವ ಪರಮ ಪ್ರತಿಭೆಯನೆ ಬೀರುತ್ತಿತ್ತು ; ಬೆಳಗುತಿತ್ತು ಕಂಡಯ್ಯ,

೭೪

ಗುರು ದೇವ ಸದಾಶಿವ ಶಿವಾಚಾರ್ಯರ ಜೀವನದಲ್ಲಿ
ಭಿನ್ನ ರಂಜನವಿರಲಿಲ್ಲ, ಆವ ಅಂಜನವಿರಲಿಲ್ಲ,

ರಂಜನಕ್ಕಾಗಿ ಅವರ ಕಣ್ಮನಂಗಳು ಕ್ಷಣಮಾತ್ರವೂ ಕಕ್ಕುಲಿಸಲಿಲ್ಲ.
ಆಂದೋಳನವನೇರಿ ಅಟ್ಟಹಾಸದಿಂದ ಮೆರೆದವರಲ್ಲ,
ಹೊಗಳು ಭಟ್ಟರಿಂದೆ ಹೊಗಳಿಸಿಕೊಂಡವರಲ್ಲ.
ಅವರ ಆ ಸಚ್ಛೀಲದಿಂದೆ ಶುಭ್ರವಾಗಿದ್ದ
ಜೀವನ ವಸನದ ಮೇಲೆ ನಸು ಕಪ್ಪು ಚುಕ್ಕೆಯಿರಲಿಲ್ಲ, ಇದ್ದಿಲ್ಲವಯ್ಯ
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಬಾಳಿನ ಹೊರೆ ಅದೆನಿತೂ ಅವರ ಹೆಗಲೇರಿರಲಿಲ್ಲವಯ್ಯ.

೭೫

ಅಕ್ಷರ ಓಂಕಾರವೆ ತಾನಾಗಿ ತವಕಗೊಂಡು,
ಶೀಲದಕ್ಷ ಸದಾಶಿವ ಶ್ರೀ ಗುರುದೇವನ ಸರೂಪವಾಂತು,
ಸಚೇತನತೆಯ, ಸದಾ ಸತ್ಯ ಶಿವ ಸುಂದರತೆಯ—
ನಿಲವಿನೊಳು ನಿಂತು ರಾರಾಜಿಸಿಹುದಯ್ಯ—
ಸದಾಶಿವ ತೇಜವಾಗಿ ಶ್ರದ್ಧಾಳುಗಳ ಹೃದಯ ಕಾಳಿಕೆಯ ಕಳೆದು,
ಕಣ್ದೆರಳಿಸಿ, ಅರಿಮೆಯ ಬರಿಸಿ ಉದ್ಧರಿಸಿಹುದಯ್ಯ,
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಭವದ ಬವಣೆಯಲಿ ಬಿದ್ದ ದೀನ ದಲಿತರ
ಬಾಳಿರುಳಿಗೆ ಹುಣ್ಣಿಮೆಯ ಚಂದಿರನಂತಿರ್ದುದಯ್ಯ,

೭೬

ಆಕಾಶ ತತ್ತ್ವದ ಸದಾಶಿವ ಶಿವಾಚಾರ್ಯನೆ,
ಆಕಾಶ ವ್ಯಾಪ್ತಿಯ ಮೀರಿದಾತನೆ,
ಆಕಾಶ ದೀಪ್ತಿಗೆ ದೀಪ್ತಿ ದಾಯಕನೆ,
ಆಕಾಶಕ್ಕೆ ಚೈತನ್ಯ ಸ್ವರೂಪನೆ,
ಆಕಾಶ ದತ್ತಣಿಂ ನಿರ್ಮಲಾಂತಃಕರಣನೆ–
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನೆ ನೀನಾದ ಕಾರಣ,
ನಿನ್ನ ಹಿರಿಮೆಯ ಹೊಗಳ ಲೆನ್ನಳವೆ ?
ಚರಾಚರ ಜೀವನಕೆ ನೀನೆ ಅನಿವಾರ್ಯ ಅವಕಾಶವಯ್ಯ,

೭೭

ಚೇತನಕ್ಕೆ ಚೇತನನಾದ ಚಿನ್ಮಯಾತ್ಮನೆ,
ನಿನ್ನಿಂದ ನಾದ, ನಿನ್ನಿಂದ ಬಿಂದು, ನಿನ್ನಿಂದ ಕಲೆ;

ನಿನ್ನಿಂದ ಸಕಲ, ನಿನ್ನಿಂದ ಸಕಲ-ನಿಷ್ಕಲ, ನಿನ್ನಿಂದ ನಿಷ್ಕಲ;
ನಿನ್ನಿಂದಾಗಸ, ನಿನ್ನಿಂದ ವಾಯು, ನಿನ್ನಿಂದ ತೇಜ;
ನಿನ್ನಿಂದ ಸಲಿಲ, ನಿನ್ನಿಂದ ನೆಲ;
ನಿನ್ನಿಂದ ತನು ಪ್ರಾಣಾತ್ಮಂಗಳು : ನಿನ್ನಿಂದ ರವಿ ಶಶಿಗಳು;
ನಿನ್ನನುಳಿದು ಇನ್ನೊಂದಿಲ್ಲವಯ್ಯ.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನೆ ನೀನಾವ ಕಾರಣ,
ನಿನ್ನ ಕರುಣವನೆ ಹಾರೈಸುತಿಹೆನಯ್ಯಾ ;
ಸಾಧನದಿಂದೆ ಸಿದ್ಧಿಗೇರಿಹ ವ್ಯಕ್ತಿತ್ವವೆ ವಿಶ್ವ ಶಕ್ತಿ ವಿಶ್ವ ದೀಪ್ತಿ
ಎಂಬುದ ಬಲ್ಲೆನಾಗಿ !

೭೮

ಸಕಲಾಚಾರ ಸ್ವರೂಪನೆ ನಿನಗೆ ನಮೋ,
ಸಕಲ ಸದ್ಗುಣ ಶೋಭಿಪನೆ ನಿನಗೆ ನಮೋ ;
ಸಕಲ ವಿದ್ಯಾ ವಿಭೂಷಿತನೆ ನಿನಗೆ ನಮೋ
ಸಕಲ ಸತ್ಯ ಶಕ್ತಿ ಸ್ವರೂಪನೆ ನಿನಗೆ ನಮೋ
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಸಕಲಾನುಗ್ರಹಕಾರಕನೆ ನಿನಗೆ ನಮೋ ನಮೋ !

೭೯

ಆ ಸಜ್ಜ್ಯೋತಿಯೆ ಸದಾಶಿವ ದೇವನ ಬಹಿರಂಗವಯ್ಯ.
ಆ ಚಿಜ್ಜ್ಯೋತಿಯೆ ಸದಾಶಿವ ಶಿವಾಚಾರ್ಯನ ಅಂತರಂಗವಯ್ಯ.
ಆ ಆನಂದ ರಸಾಮೃತವೆ ಸದಾಶಿವ ಶ್ರೀ ಗುರುದೇವನ ಹೃದಯವಯ್ಯ.
ಆ ಬೆಳಗ ಕಂಡು ಕಣ್ದೆರೆದೆನು,
ಆ ಅಮೃತರಸವನುಂಡು ಸಾವಳಿದೆನು.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರನ,
ನಿರುಪಮಕೃಪಾಪಾತ್ರನಾದೆನು.

೮೦

ಕಾಯಾನು ಭಾವಿಯಾಗಿ ಕಾಯದಲೆ ಮುಕ್ತ ನೀನಯ್ಯ.
ಕರಣಾನು ಭಾವಿಯಾಗಿ ಕರಣದಲೆ ಮುಕ್ತ ನೀನಯ್ಯ.
ಪ್ರಾಣಾನು ಭಾವಿಯಾಗಿ ಪ್ರಾಣದಲೆ ಮುಕ್ತ ನೀನಯ್ಯ.
ಆತ್ಮಾನು ಭಾವಿಯಾಗಿ ಆತ್ಮದಲೆ ಮುಕ್ತ ನೀನಯ್ಯ.

ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಸರ್ವಾಂಗ ಲಿಂಗ ಸಂಗ ಸಮರಸಾನುಭಾವಿಯಾದ
ನಿನಗೆ ನಮೋ ನಮೋ !

೮೧

ಲಿಂಗವಿಡಿದು ಲಿಂಗ ಸಂಗವಿಲ್ಲದೆ
ಭಂಗಕೊಳಗಾದಾತ ನೀನಲ್ಲವಯ್ಯ.
ಲಿಂಗವಿಡಿದು ಕಾಯಗುಣವ ಕಳೆದೆ.
ಲಿಂಗವಿಡಿದು ಕರಣೇಂದ್ರಿಯಗಳ ಗುಣಗಳ ಕಳೆದೆ.
ಲಿಂಗವಿಡಿದು ಪ್ರಾಣ ಗುಣವ ಕಳೆದೆ.
ಲಿಂಗವಿಡಿದು ಜೀವ ಗುಣವ ಕಳೆದೆ
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರನಲ್ಲಿ
ಲಿಂಗವಿಡಿದು ಲಿಂಗವಾಗಿ ಸರ್ವ ಸಂಗವ ಪರಿಹರಿಸಿದೆ.

೮೨

ಲಿಂಗವಂತರೆಂಬರು, ಲಿಂಗವ ಧರಿಸರು :
ಲಿಂಗ ಭಕ್ತರೆಂಬರು, ಲಿಂಗವನಾರಾಧಿಸರು.
ಲಿಂಗ ಶರಣರೆಂಬರು, ಭವಿಗಳಿಗೆ ಶರಣಾಗಿಹರು.
ಲಿಂಗ ಪ್ರಾಣಿಗಳೆಂಬರು, ಶೃಂಗಾರ ಪ್ರಾಣಿಗಳಾಗಿಹರು.
ಲಿಂಗ ಪ್ರಸಾದಿಗಳೆಂಬರು, ಭವಿ ಭೋಜನಕ್ಕೆಳಸುವರು.
ಹಯವನುಳಿದು ಹಂದಿಯನೇರುವರೆ ?
ಇಂತಪ್ಪ ಸೂತಕಿಗಳ ನೋಡೆ ನುಡಿಸೆ ;
ಹುಟ್ಟು ಭವಿಗಳು ಲೇಸು ; ಕೆಟ್ಟ ಭವಿಗಳು ಕೇಡು.
ಇವಂದಿರು ಕೆಡುವ ಕೇಡಿಂಗೆ ಕಡೆ ಮೊದಲಿಲ್ಲೆಂದು ನುಡಿದು
ನೆನೆದು ನೋಯುತ್ತಿರ್ದನೆಮ್ಮ ಸದಾಶಿವ ಶ್ರೀ ಗುರು ದೇವನು,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ,–
ನಿರಂತರ ಜೀವನದೊಳು !

೮೩

ಕಾಡಿನಲ್ಲಿ ಕಣ್ಣು ಮುಚ್ಚಿ ಕುಳಿತ ಕುರುಡು ತಪಸ್ವಿ ನೀನಲ್ಲವಯ್ಯ.
ನಾಡಿನಲ್ಲಿ ನಾಡಾಡಿಯಾಗಿಹ ಹತ ತೇಜಸ್ವಿ ನೀನಲ್ಲವಯ

ಕ್ರಿಯಾಚಾರವಿಡಿದು ಕ್ರಿಯಾಚಾರಿಗಳ ಮಾಡಿದೆ ;
ಜ್ಞಾನಾಚಾರವಿಡಿದು ಜ್ಞಾನಾಚಾರಿಗಳ ಮಾಡಿದೆ ;
ಭಾವಾಚಾರವಿಡಿದು ಭಾವಾಚಾರಿಗಳ ಮಾಡಿದೆ.
ಶ್ರೀನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಆತ್ಮಾಚಾರವಿಡಿದು ಆತ್ಮಾಚಾರಿಗಳ ಮಾಡಿದೆ.
ಓ ಸದಾಶಿವ ಗುರು ದೇವನೆ,
ನಿನ್ನಾಚಾರ ಸಾಮಾಜಿಕಾಚಾರವಯ್ಯ ;
ನೀನು ಸಮಾಜ ಪ್ರೇಮಿಯಾಗಿ ಜೀವಿಸಿರೆಯಯ್ಯ.

೬೪

ನಿನ್ನದು ಒಡಲ ಹೊರೆವ ಉದ್ಯಮವಲ್ಲ ;
ಒಡಲ ಪೊರೆವ ಸತ್ಯ ಶುದ್ಧ ಕಾಯಕವಯ್ಯ.
ನಿನ್ನದು ಒಡೆತನಕ್ಕಾಗಿ ಕಲಿತ ಕಲಿವ ಅಕ್ಷರ ವಿದ್ಯೆಯಲ್ಲ ;
ಆತ್ಮಾಧಿಕಾರವ ಪಡೆವ-ಪಡೆದ ಆತ್ಮ ವಿದ್ಯೆಯಯ್ಯ
ನಿನ್ನದು ಭೋಗ ಕೆಳಸುವ ಲೌಕಿಕ ಭಾಗ್ಯ ಸಂಗ್ರಹವಲ್ಲ ;
ಲೋಕೋತ್ತರ ಸ್ವಾನು ಭಾವ ಸೌಭಾಗ್ಯ ಸಂಗ್ರಹವಯ್ಯ.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನ
ಪೂರ್ಣ ಸ್ವರೂಪವ ಪಡೆವುದೆ ನಿನ್ನ ಮಣಿಹವಾಗಿತ್ತಯ್ಯ.

೬೫

ಕಾಯೇಂದ್ರಿಯಂಗಳ ಕಟ್ಟಿ, ಮಾಯಾ ಮೋಹಂಗಳ ಮೆಟ್ಟಿ,
ಪ್ರಾಕೃತಿಕ ಸರ್ವ ಅವಗುಣಂಗಳ ಕುಟ್ಟಿ,
ಮಲತ್ರಯಂಗಳ ಸುಟ್ಟು, ಮಹಾ ಜ್ಞಾನ ಜ್ಯೋತಿಯ ಬೆಳಗಿ,
ಮಂಗಳಾಚಾರಂಗಳ ಹರಹಿ,
ಶಿವ ಚಿತ್ತ-ಸಹು ಭಾವಂಗಳಿಂದೆ ನಿತ್ಯ ಲಿಂಗಾರ್ಚನ,
ನಿತ್ಯ ಶಿವಾಗಮಾಧ್ಯಯನ, ಮಾಡುತ್ತಿದ್ದ
ಮಹಾ ಗುರು ದೇವ ಸದಾಶಿವನಯ್ಯ,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ !

೬೬

ಸದಾಶಿವ ಗುರು ದೇವನಂತಹ ಶಿವಾಚಾರವಂತರ ಕಾಣೆ ;
ಶಿವ ವಿಚಾರವಂತರ ಕಾಣೆ ; ಶಿವಾನುಭಾವಿಗಳ ಕಾಣೆ.

ಇದು ಕಾರಣ,

“ ವ್ಯಾಪಾರಂ ಸಕಲಂ ತ್ಯಕ್ತ್ವಾ ಪೂಜಯೇಚ್ಚ ಸದಾಶಿವಂ ”

ಎಂಬ ಶ್ರುತಿ ಮತವ ನಂಬುವುದೆನ್ನ ಮನ ;

ನಂಬಿ ನಚ್ಚಿ ಸದಾಶಿವ ಗುರು ದೇವನ

ಆರಾಧಿಸುವುದೆನ್ನ ಜೀವನ.

ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ,

ಇದೆನ್ನ ಸತ್ಯ ವಚನ, ನಿತ್ಯ ಜೀವನ.

೮೭

ಹೃದಯವೆಂಬ ಹೊಂದಾವರೆ ;

ಅದರದು ನಿರ್ವಿಷಯ ವಾಸನೆ ;

ನಿರಾಮಯ ರಸದ್ವಯ :

ಒಂದು ಭಕ್ತಿ ರಸ, ಮತ್ತೊಂದು ಕಾರುಣ್ಯ ರಸ.

ಭಕ್ತಿ ರಸ ಭಗವಂತನೊಳು ;

ಕಾರುಣ್ಯ ರಸ ಶಿಷ್ಯ ಶಿಶುಗಳೊಳು,

ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ,

ಅಲ್ಲಿ ಸದಾ–ಶಿವ ಭೃಂಗ ವಾಸ !

೮೮

ಚಿತ್ತ ಗಂಧ ಜಲ ಮಜ್ಜನಂಗೆಯ್ದು,

ಜ್ಞಾನದ ನಂದದಾರತಿಯ ನೆತ್ತಿ,

ಹೃದಯದ ಕಂದದ ಹೂವನೇರಿಸಿ,

ಪ್ರಾಣ ಲಿಂಗವ ಅಂದಗೊಳಿಸಿ,

ಪ್ರಣವ ನಾದದ ಗಂಟೆಯ ಬಾಜಿಸಿ,

ಮನ ಬಿಂದು ಸೂಸದೆ, ಹಮ್ಮಿನಿಂ, ಮುಂದುಗೆಡದೆ,

ಭಾವ ಪೂರ್ಣ ಕಲೆಯ ಕೆಡಿಸದೆ,

ಜೀವ ಪದಾರ್ಥವ ಗಡಣಿಸಿ–ನಿವೇದಿಸಿ,

ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ ನರಿವಂತೆ

ಅಂದಂದಿನ ಹೊಚ್ಚ ಹೊಸ ಪೂಜೆಯ ನೆಸಗುತಿರ್ದ ನೆಮ್ಮ

ಸದಾಶಿವ ಗುರು ದೇವ–ಸಮಯವರಿಯದೆ–ಮೀರದೆ !

೮೯

ಆಚಾರದೊಳಗಣ ಆಚಾರವಾಗಿ,
ವಿಚಾರದೊಳಗಣ ವಿಚಾರವಾಗಿ,
ಅನುಭಾವದೊಳಗಣ ಅನುಭಾವವಾಗಿ,
ಆನಂದದೊಳಗಣ ಆನಂದವಾಗಿ,
ಬೆಳಗಿನೊಳಗಣ ಬೆಳಗಾಗಿ,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಸಶಲ್ಲಿ ತಾನಿರ್ದನಯ್ಯ,
ಸದಾಶಿವ ಗುರುದೇವನು ಸ್ವತಃ ಸಿದ್ಧನಾಗಿ!

೯೦

ಎನ್ನ ಶಿರವೆ ಶ್ರೀ ಗಿರಿ, ಚಿತ್ಕಳೆಯೆ ಸೂರ್ಯ,
ಶಿಖಾಶಿಖರವೆ ಸಿಂಹಾಸನ.
ಅಲ್ಲಿ ಮಂಡಿಸಿಹ ಪಂಡಿತಾರಾಧ್ಯನೆ —
ಸದಾಶಿವ ಶಿವಾಚಾರ್ಯ ನೋಡಯ್ಯ,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ!

೯೧

ಎನ್ನ ಆಧಾರಕ್ಕೆ ನಕಾರವಾಗಿ ಪಾರ್ಥಿವ ಪೂರ್ವವ ಕಳೆದನಯ್ಯ.
ಎನ್ನ ಸ್ವಾಧಿಷ್ಠಾನಕ್ಕೆ ಮಕಾರವಾಗಿ ಸಾಲಿಲ ಪೂರ್ವವ ಕಳೆದನಯ್ಯ,
ಎನ್ನ ಮಣಿಪೂರಕಕ್ಕೆ ಶಿಕಾರವಾಗಿ ತೈಜಸ ಪೂರ್ವವ ಕಳೆದನಯ್ಯ.
ಎನ್ನ ಅನಾಹುತಕ್ಕೆ ವಾಕಾರವಾಗಿ ವಾಯವೀಯ ಪೂರ್ವವ ಕಳೆದನಯ್ಯ.
ಎನ್ನ ವಿಶುದ್ಧಿಗೆ ಯಕಾರವಾಗಿ ವ್ಯೋಮಾಂಗದ ಪೂರ್ವವ ಕಳೆದನಯ್ಯ.
ಎನ್ನ ಆಜ್ಞೆಗೆ ಓಂಕಾರವಾಗಿ ಆತ್ಮ ಪೂರ್ವವ ಕಳೆದನಯ್ಯ.
ಎನ್ನ ಸಹಸ್ರಾರಕ್ಕೆ ಅಕಾರವಾಗಿ ಭಾನುಪೂರ್ವವ ಕಳೆದನಯ್ಯ,
ಎನ್ನ ಶಿಖಾಶಿಖರಕ್ಕೆ ಉಕಾರವಾಗಿ ಶಶಿಪೂರ್ವವ ಕಳೆದನಯ್ಯ.
ಎನ್ನ ಪಶ್ಚಿಮಕ್ಕೆ ಮಕಾರವಾಗಿ ತಾರಕ ಪೂರ್ವವ ಕಳೆದನಯ್ಯ.
ಇಂತೀ ಎನ್ನ ನವಚಕ್ರಕ್ಕೆ ನವವಿಧ ಮಂತ್ರಸ್ವರೂಪವಾದಾತ
ಶ್ರೀ ಸದಾಶಿವ ಶಿವಾಚಾರ್ಯನಯ್ಯ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ ಸ್ವರೂಪನಾದ
ಆತನ ಶ್ರೀ ಚರಣಕ್ಕೆ ಶರಣೆಂದು ಬದುಕಿದೆನಯ್ಯ.

೯೨

ಇಂದ್ರಿಯಂಗಳಿಂಗೆಲ್ಲ ಈಶ್ವರನಾಗಿರ್ದನಯ್ಯ.
ಕಾಯಕರಣಂಗಳಿಗೆಲ್ಲ ಈಶಾನನಾಗಿರ್ದನಯ್ಯ.
ಸರ್ವ ಭೂತ, ಸರ್ವ ವಿದ್ಯೆಗಳಿಗೆಲ್ಲ ಮಹೇಶಾನನಾಗಿರ್ದನಯ್ಯ.
ಬ್ರಹ್ಮ ವಿಷ್ಣು ರುದ್ರ ಗುಣಧರ್ಮಂಗಳನೊಳಗೊಂಡು ಪರಶಿವನಾಗಿರ್ದನಯ್ಯ,
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ನಮ್ಮ ಸದಾಶಿವ ಶ್ರೀಗುರುದೇವನು .

೯೩

ರಜಸ್ತಮೋಗುಣ ರಹಿತನಾಗಿ, ಸತ್ವಗುಣ ಸಹಿತನಾಗಿ,
ಸರ್ವಾತೀತನಾಗಿರ್ದ ಸದಾಶಿವ ಶಿವಾಚಾರ್ಯನು.
ಶಾಂತಿ ದಾಂತಿಗಳನೊಳಗೊಂಡು, ಶಾಂತ್ಯತೀತನಾಗಿರ್ದನು .
ಯೋಗ ಶಿವಯೊಗವನೊಳಕೊಂಡು ಯೋಗಾತೀತನಾಗಿದ್ದನು.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ
ಆಚಾರ ವಿಚಾರಗಳನೊಳಕೊಂಡು ಅಪರೋಕ್ಷಾನುಭಾವಿಯಾಗಿರ್ದನು.

೯೪

ಆಧಾರಾದಿ ಆರು ನೆಲೆಗಳನೇರಿ, ಆಜ್ಞೆಯಲಿ ತಂಗಿ,
ಓಂಕಾರದಿಂಚರ ನುಂಗಿ, ಆ ಇಂಚರದಿಂದೆ ಸಂಚಲಿಸದೆ
ಸಂತೋಷಿಸಿ ಮುನ್ನಡೆದು, ಸಹಸ್ರಾರದ ಬ್ರಹ್ಮರಂಧ್ರವ ಸೇರಿ,
ಆ ಶೈವೀರಸವನಾಸ್ವಾದಿಸಿ, ಸಂತೃಪ್ತಿಸಿ–ವಿಶ್ರಮಿಸಿ,
ಅಲ್ಲಿಂದತ್ತಣ ಶಿಖಾಶಿಖರವೆಂಬ ಮೇರು ಮಂದಿರವನೇರಿ,
ಶಬ್ದ ಮುಗ್ಧನಾಗಿ, ನಿಶ್ಶಬ್ದ ಬ್ರಹ್ಮನಾಗಿ,
ನಿರ್ದೇಹಿಯಾಗಿ, ನಿರ್ಭ್ರಾಂತನಾಗಿ, ನಿಷ್ಪತ್ತಿಗೊಂಡು,
ನಿಜ ಚಿತ್ಕಳಾ ನಿಳಯದೊಳು ನಿರ್ವಾಣ ನಿಲವ ನಿರೂಪಿಸಲು ಮಡಿ ಗಡಣವುಂಟೆ
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ?

೯೫

ಅಂಗವಿಡಿದು ಆಯತವಾಗಿಹುದು ಇಷ್ಟಲಿಂಗ .
ಪ್ರಾಣವಿಡಿದು ಸ್ವಾಯತವಾಗಿಹುದು ಪ್ರಾಣಲಿಂಗ.

ಭಾವವಿಡಿದು ಸನ್ನಹಿತವಾಗಿಹುದು ಭಾವಲಿಂಗ.
ಭಾವಲಿಂಗವಿಡಿದು ಜ್ಞಾನಲಿಂಗ,
ಜ್ಞಾನಲಿಂಗವಿಡಿದು ಕ್ರಿಯಾಲಿಂಗ ;
ಕ್ರಿಯಾಲಿಂಗವಿಡಿದು ಜ್ಞಾನಲಿಂಗ;
ಜ್ಞಾನಲಿಂಗವಿಡಿದು ತೃಪ್ತಿಲಿಂಗ.
ಈ ಅನ್ಯೋನ್ಯ ರಹಸ್ಯವನರಿವಡೆ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶನಲ್ಲಿ
ನಮ್ಮ ಸದಾಶಿವ ಶಿವಾಚಾರ್ಯನಲ್ಲದಿಲ್ಲವಯ್ಯ.

೯೬

ಕಾಯಶೂನ್ಯ ಸದಾಶಿವ ಗುರುದೇವಂಗೆ,
ಪ್ರಾಣಶೂನ್ಯ ಸದಾಶಿವ ಗುರುದೇವಂಗೆ,
ಭಾವಶೂನ್ಯ ಸದಾಶಿವ ಗುರುದೇವಂಗೆ
ಜೀವಶೂನ್ಯ ಸದಾಶಿವ ಗುರುದೇವಂಗೆ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶನಲ್ಲಿ
ಸದಾ-ಶಿವಶೂನ್ಯನಾಗಿರ್ದನಯ್ಯಾ.

೯೭

ಕಾಯವ ಅಕಾಯ-ಪರಕಾಯವ ಮಾಡಿದ
ಸಚ್ಚಾರಿತ್ರ ಸದಾಶಿವ ಗುರುದೇವನದು.
ಪ್ರಾಣವ ಪ್ರಣವ-ಪ್ರಣವ ಪ್ರಾಣವ-ಪರಮ ಪ್ರಾಣವ ಮಾಡಿದ
ಚಿಚ್ಚಾರಿತ್ರ ಸದಾಶಿವ ಗುರುದೇವನದು.
ಭಾವವ ಶಿವಭಾವ-ಪರಭಾವವ ಮಾಡಿದ
ಸತ್ಯಸುಖ ಚಾರಿತ್ರ ಸದಾಶಿವ ಗುರುದೇವನದು.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ !

೯೮

ಸದಾಶಿವ ಶಿವಾಚಾರ್ಯನ ಉತ್ತರಾಂಗದೊಳು
ಚಿತ್ಕಳೆಯು ತೊಳಗಿ ಬೆಳಗುತ್ತಿತ್ತು ;
ಪೂರ್ವಾಂಗದೊಳು ಚಿದ್ರಸ ಮಡುಗಟ್ಟಿ ನೆಲಸಿತ್ತು ;
ಸರ್ವಾಂಗದೊಳು ಚಿನ್ನಾದ ತುಂಬಿ ಚಿಮ್ಮುತ್ತಿತ್ತು.

ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಶಿವಚಾರ್ಯನ ನಿಜ ನಿಲವು,
ಉರಿ ಉಂಡ ಕರ್ಪುರದಂತೆ,
ಆಲಿಕಲ್ಲು ನುಂಗಿದ ಅಂಬುವಿನಂತೆ,
ಶಬ್ದ ಒಳಕೊಂಡ ನಿಶ್ಯಬ್ದದಂತೆ ಇದ್ದಿತ್ತು.
ಆತ ಚಿತ್ಕಲೆಯ ಚನ್ನಿಗ, ಚಿದ್ರಸದ ಸೊಗಸಿಗ ;
ಚಿನ್ನಾದ ನೇಹಿಗ ನೋಡಯ್ಯ !

೯೯

ಆರು ಮಾಡಬಲ್ಲರಯ್ಯಾ-ಸಚ್ಛೀಲವೆಂಬುವನು—
ಶ್ರೀ ಸದಾಶಿವ ಶಿವಾಚಾರ್ಯನಲ್ಲದೆ ?
ಆರು ಮಾಡಬಲ್ಲರಯ್ಯಾ-ಸತ್ಯ ಶಿವಾರ್ಚನೆಯನು—
ಶ್ರೀಸದಾಶಿವ ಶಿವಾಚಾರ್ಯನಲ್ಲದೆ ?
ಆರು ಸಂಪಾದಿಸಬಲ್ಲರಯ್ಯಾ-ಉಭಯಾಂಗ ಶುದ್ಧಿಯನು—
ಶ್ರೀಸದಾಶಿವ ಶಿವಾಚಾರ್ಯನಲ್ಲದೆ ?
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಇಂತೀ ಚತುರ್ವಿಧ ಸಾರಾಯ ಸಂಗ್ರಹದಲ್ಲಿ
ಸೀಮೆಯಿಲ್ಲದ ಶ್ರೀಸದಾಶಿವ ಶಿವಾಚಾರ್ಯಂಗೆ
ಮೂರುಜಗದೊಳಗೆ ಆರನೂ ಸರಿಗಾಣೆನಯ್ಯ.

೧೦೦

ಆಚಾರ ಸಾಹಿತ್ಯ ಸದಾಶಿವ ಗುರುದೇವನಲ್ಲಿ ;
ವಿಚಾರ ಸಾಹಿತ್ಯ ಸದಾಶಿವ ಗುರುದೇವನಲ್ಲಿ ;
ಅವಧಾನ ಸಾಹಿತ್ಯ ಸದಾಶಿವ ಗುರುದೇವನಲ್ಲಿ ;
ಅನುಭಾವ ಸಾಹಿತ್ಯ ಸದಾಶಿವ ಗುರುದೇವನಲ್ಲಿ ;
ಅಭಿಜಾತ ಸಾಹಿತ್ಯ ಸದಾಶಿವ ಗುರುದೇವನಲ್ಲಿ ;
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಅಚ್ಚ ಅವಿರಳ ಸಾಹಿತ್ಯ ಸದಾಶಿವ ಗುರುದೇವನಲ್ಲಿ

೧೦೧

ವೇಷವನವಲಂಬಿಸಿ ರಂಜಿಸುವ ರಾಗಿಯಲ್ಲ,
ಚೋಹ ಮೋಹವಿಲ್ಲವಾಗಿ !
ಭಾಷೆಯನವಲಂಬಿಸಿ ಬಿಮ್ಮಿಸುವ ಬಿಂಕಿಗನಲ್ಲ ,
ವಚನ ಚಾಪಲ್ಯವಳಿದನಾಗಿ !
ವಿಷಯವಿಡಿದು ಭೋಗಿಸುವ ಭೋಗಿಯಲ್ಲ,
ಪ್ರಸಾದ ಪರಿಣಾಮಿ ತಾನಾಗಿ !
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಸದಾಶಿವ ಶಿವಾಚಾರ್ಯನು ಸಕಾಮಿಯಲ್ಲ, ನಿಷ್ಕಾಮಿಯಲ್ಲ ;
ಶುದ್ಧ ಸಹಜ ಪ್ರೇಮಿಯಾಗಿ !

೧೦೨

ನೆನೆವ ನೆನಿಕೆ ಶಿವವಲ್ಲದಿಲ್ಲ,
ಕೇಳುವ ಕೇಳಿಕೆ ಶಿವಮಂತ್ರವಲ್ಲದಿಲ್ಲ.
ಹೇಳುವ ಹೇಳಿಕೆ ಶಿವಾನುಭಾವವಲ್ಲದಿಲ್ಲ.
ಸೋಂಕುವ ಸೋಂಕು ಶಿವದ್ರವ್ಯವಲ್ಲದಿಲ್ಲ.
ನೋಡುವ ನೋಡಿಕೆ ಶಿವರೂಹಲ್ಲದಿಲ್ಲ.
ಆರೋಗಿಸುವ ಆರೋಗಣೆ ಶಿವಪ್ರಸಾದವಲ್ಲದಿಲ್ಲ.
ಮೂಸವ ಮೂಸಿಕೆ ಶಿವಗಂಧವಲ್ಲದಿಲ್ಲ.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಸದಾ ಸರ್ವಾಂಗ ಶೀಲನಿರತ ಸದಾಶಿವ ಶಿವಾಚಾರ್ಯಂಗೆ !

೧೦೩

ಶಬ್ದಮೋಹಿಯಲ್ಲ ನಮ್ಮ ಗುರುದೇವ ;
ಶಬ್ದ ಪ್ರಸಾದ ಮೋಹಿ.
ಸ್ಪರ್ಶ ಮೋಹಿಯಲ್ಲ ನಮ್ಮ ಗುರುದೇವ ;
ಸ್ಪರ್ಶ ಪ್ರಸಾದ ಮೋಹಿ.
ರೂಪ ಮೋಹಿಯಲ್ಲ ನಮ್ಮ ಗುರುದೇವ ;
ರೂಪ ಪ್ರಸಾದಮೋಹಿ.
ರಸಮೋಹಿಯಲ್ಲ ನಮ್ಮ ಗುರುದೇವ ;

ರಸಪ್ರಸಾದ ಮೋಹಿ.
ಗಂಧ ಮೋಹಿಯಲ್ಲ ನಮ್ಮ ಗುರುದೇವ ;
ಗಂಧ ಪ್ರಸಾದ ಮೋಹಿ.
ಇದು ಕಾರಣ
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಸದಾಶಿವ ಗುರುದೇವಂಗೆ ಆವ ವಿಕಾರವಿಲ್ಲವಾಗಿ,
ಆತ ಸದಾಶಿವ ಪ್ರಸಾದಿ !

೧೦೪

ಪ್ರಸಾದ ಕಾಯನಾಗಿ ಕಾಯವಿಕಾರವಿಲ್ಲ.
ಪ್ರಸಾದ ವಾಕ್‌ನಾಗಿ ವಾಣಿವಿಕಾರವಿಲ್ಲ.
ಪ್ರಸಾದ ಮನಸ್ಕನಾಗಿ ಮನೋವಿಕಾರವಿಲ್ಲ.
ಪ್ರಸಾದ ಪ್ರಾಣನಾಗಿ ಪ್ರಾಣವಿಕಾರವಿಲ್ಲ.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಪ್ರಸಾದಾತ್ಮನಾಗಿ ಜೀವವಿಕಾರವಿಲ್ಲ ಸದಾಶಿವಂಗೆ !

೧೦೫

ಕಾಲದಿಂದೆ ಸವೆದಾತನಲ್ಲ,
ಕರ್ಮದಿಂದೆ ಸವೆದಾತನಲ್ಲ ;
ಮಾಯೆಯಿಂದೆ ಸವೆದಾತನಲ್ಲ ;
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಸದಾ ಸುಶೀಲದಿಂದೆ ಸವೆದಾತ ಸದಾಶಿವ ಶ್ರೀಗುರುದೇವ !

೧೦೬

ತನುವಿನ ಮೇಲೆ ತವಕವಿಲ್ಲ.
ಧನದ ಮೇಲೆ ದಟ್ಟಾಸೆಯಿಲ್ಲ.
ಹೆಣ್ಣಿನ ಮೇಲೆ ಹುಲು ಮೋಹವಿಲ್ಲ.
ಮಣ್ಣಿನ ಮೇಲೆ ಮಮತ್ವ ಮುನ್ನಿಲ್ಲ.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಸುಖದುಃಖಗಳ ಭಾವವಿಲ್ಲದ ಸದಾಶಿವದೇವಂಗೆ !

೧೦೭

ಲಿಂಗ ಸಾಹಿತ್ಯಕ್ಕೆ ಸೀಮೆಯುಂಟು,
ಜಂಗಮ ಸಾಹಿತ್ಯಕ್ಕೆ ಸೀಮೆಯುಂಟು ;
ಪಾದೋದ-ಪ್ರಸಾದ ಸಾಹಿತ್ಯಕ್ಕೆ ಸೀಮೆಯುಂಟು ;
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಗುರು ಸಾಹಿತ್ಯಕ್ಕೆ ಸೀಮೆಯೆಂಬುದಿಲ್ಲ.

೧೦೮

ಸದಾಶಿವ ಗುರುದೇವಂಗೆ ಆಕಾಶವೆ ಅಂಗ ;
ಆ ಅಂಗಕ್ಕೆ ಸುಜ್ಞಾನ-ಸುಶೀಲಂಗಳೆ ಹಸ್ತಂಗಳು.
ಆ ಹಸ್ತಂಗಳಲಿ ಶಬ್ದ-ಅರ್ಥ-ಭಾವಂಗಳೆ ಪದಾರ್ಥಂಗಳು.
ಅನುಭವಾನಂದಂಗಳೆ ಭಕ್ತಿಗಳು.
ಆ ಅಂಗಕ್ಕೆ ಪ್ರಸಾದವೆ ಲಿಂಗ ;
ಆ ಲಿಂಗಕ್ಕೆ ಪರಾಶಕ್ತಿ ; ಶಾಂತ್ಯತೀತಕಳೆ ;
ಶ್ರೋತ್ರೇಂದ್ರಿಯವೆ ಮುಖ.
ಆ ಮುಖಕ್ಕೆ ಶಬ್ದಾರ್ಥ ಭಾವಂಗಳನು,
ರೂಪು ರುಚಿ ತೃಪ್ತಿಯನರಿದರ್ಪಿಸಿ,
ಸುಶಬ್ದ ಪ್ರಸಾದವನಾರೋಗಿಸಿ,
ಸದಾನಂದದೊಳಗಿಪ್ಪನೆಮ್ಮ ಸದಾಶಿವ ಗುರುದೇವ ಕಂಡಯ್ಯ,
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ !

೧೦೯

ಕೇಳಿ ಕೇಳನು, ಮುಟ್ಟಿ ಮುಟ್ಟನು ;
ನೋಡಿ ನೋಡನು, ಉಂಡು ಉಣ್ಣನು ;
ಮೂಸಿ ಮೂಸನು, ನೆನೆದು ನೆನೆಯನು.
ಸದಾಶಿವ ಗುರುದೇವನ ಶೀಲವಿಂತಿಪ್ಪುದಯ್ಯ,
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಆತಂಗೆ ಆವ ಸಂಗ ಸೂತಕವಿಲ್ಲ, ಭಂಗಪಾತಕವಿಲ್ಲ;
ಸಂಯಮಶೀಲಿಯಾಗಿ ಜಲಪದ್ಮ ಪತ್ರದಂತಿರ್ಪನು,

೧೧೦

ಆನೆಂಬುದಿಲ್ಲ, ನೀನೆಂಬುದಿಲ್ಲ ;
ಕಾಯವೆಂಬುದಿಲ್ಲ, ಕರಣವೆಂಬುದಿಲ್ಲ ;
ಜಡವೆಂಬುದಿಲ್ಲ, ಜಂಗಮವೆಂಬುದಿಲ್ಲ ;
ಅಭಿಮಾನವೆಂಬುದಿಲ್ಲ, ಅಹಂಕಾರವೆಂಬುದಿಲ್ಲ ;
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಸದಾಶಿವ ಗುರುದೇವಂಗೆ
ಪ್ರಾಕೃತ ಗುಣಧರ್ಮಂಗಳಿಲ್ಲ, ಭಿನ್ನ ಭಾವಂಗಳಿಲ್ಲ.

೧೧೧

ಆಶೆ ಆಮಿಷ ತಾಮಸಂಗಳ ಸುಳುಹು ನಿಂದಿತ್ತು.
ಪಾಪ ಪುಣ್ಯಂಗಳ ಬಗೆಯು ಬತ್ತಿತ್ತು.
ಲೋಭ ಮೋಹಂಗಳ ಹಂದರ ಹಿಂಗಿತ್ತು
ಗುರು–ಶಿಷ್ಯರೆಂಬ ಬಿರುಕು ಮುಚ್ಚಿ ಏಕೋಭಾವ ಒಡಮೂಡಿತ್ತು.
ಇಷ್ಟ–ಪ್ರಾಣಂಗಳ ಭೇದವಡಗಿತ್ತು.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಸದಾಶಿವ ಶ್ರೀಗುರುದೇವನಲ್ಲಿ–
ಸರ್ವಸಮತಾಭಾವ ಸಮನಿಸಿತ್ತು .

೧೧೨

ಸದಾಶಿವ ಶಿವಾಚಾರ್ಯನ ಸಯ್ಪಿನ ಹಸ್ತ ಪರುಷ ಕಂಡಯ್ಯ ;
ಅದು ಸೋಂಕಿದ ಕಬ್ಬುನ ಸುವರ್ಣವಪ್ಪುದು ತಪ್ಪದು.
ಸದಾಶಿವ ಶಿವಾಚಾರ್ಯನ ಮಾಸದ ಮನ ಪರುಷ ಕಂಡಯ್ಯ ;
ಅದು ನೆನೆದ ನೆನಿಕೆ ಧ್ಯಾನವಪ್ಪುದು ತಪ್ಪದು .
ಸದಾಶಿವ ಶಿವಾಚಾರ್ಯನ ಭ್ರಾಂತಿ ರಹಿತ ಭಾವ ಪರುಷ ಕಂಡಯ್ಯ ;
ಅದು ಬಗೆದ ಭಾವನೆ ಭಾವ್ಯವಪ್ಪುದು ತಪ್ಪದು .
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ ;
ಇಂತಿವು ಪರುಷವಾಗಿದ್ದಡೆಯೂ
ಪರುಷ ಭಾವ ಆತಂಗಿರಲಿಲ್ಲವಯ್ಯ.

೧೧೩

ಬಿಡುವ ಹಿಡಿವ ಹೋಣೆಗಾರನಲ್ಲ ;
ಇಡುವ ಕೊಡುವ ಗೊಡವೆಗಾರನಲ್ಲ ;
ಉಡುವ ತೊಡುವ ಸಿಂಗಾರವವನಲ್ಲ ;
ಹಲವು ಹತ್ತಕ್ಕೆ ಹರಿದಾಡುವವನಲ್ಲ.
ತನ್ನಿರುವು ಹರವು, ತನ್ನಾಗು ಹೋಗುಗಳೆಲ್ಲ
ತನ್ನ ಚಿದ್ಘುರುವರನ ಅಧೀನವೆಂದು ನೆರೆ ನಂಬಿದಾತನೆಮ್ಮ
ನಿರ್ಲೋಭಭಾವದ ಸದಾಶಿವ ಶಿವಾಚಾರ್ಯನು ;
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ !

೧೧೪

ಅಂತರಂಗದಲಿ ಅಳಲುವನಲ್ಲ ; ಬಹಿರಂಗದಲಿ ಬಳಲುವನಲ್ಲ ;
ಎರಡನತಿಗಳೆದು ತಾನೆ ತಾನಾಗಿರ್ಪ ಸಹಜನೋಡಾ !
ಲಿಂಗವೇ ಆಗಿದ್ದನಲ್ಲದೆ, ಅಂಗಭಾವವಿದ್ದಿಲ್ಲ .
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ,
ನಿಮ್ಮ ಸದಾಶಿವ ಶಿವಾಚಾರ್ಯಂಗೆ !

೧೧೫

ಶಿವ ನೆನಹೆ ಕ್ರಿಯೆಯಾಗಿ, ಶಿವ ನೆನಹೆ ಜ್ಞಾನವಾಗಿ,
ಶಿವನೆನಹೆ ಅನುಭಾವವಾಗಿ, ಶಿವನೆನಹೆ ಆನಂದವಾಗಿ,
ಶಿವ ನೆನಹೆ ತಾನಾಗಿ, ನೆನೆವ ಮನವಿಲ್ಲವಾಗಿ,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಐಕ್ಯವಾದನು ಸದಾಶಿವ ಶಿವಾಚಾರ್ಯನು.

೧೧೬

ಆಚಾರವಿಡಿದು ಗುರುವಾದ, ಆಚಾರವಿಡಿದು ಲಿಂಗವಾದ ;
ಆಚಾರವಿಡಿದು ಜಂಗಮ ವಾದ, ಆಚಾರವಿಡಿದು ಪ್ರಸಾದಿಯಾದ ;
ಆಚಾರವಿಡಿದು ಪ್ರಾಣ ಲಿಂಗಿಯಾದ, ಆಚಾರವಿಡಿದು ಐಕ್ಯವಾದ.
ಆಚಾರವರಕು ಸದಾಶಿವ ಶಿವಾಚಾರ್ಯನು,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ ತಾನಾದ !

೧೧೭

ಪಂಚೇಂದ್ರಿಯಂಗಳಲಿ ಸಜ್ಜ್ಯೋತಿ,
ಪಂಚ ಕರಣಂಗಳಲಿ ಚಿಜ್ಜ್ಯೋತಿ ;
ಭಾವ–ಜೀವಂಗಳಲಿ ಸುಖಜ್ಯೋತಿ—
ತೊಳಗಿ ಬೆಳ್ಳನೆ ಬೆಳಗುತ್ತಿದ್ದವು ಸದಾಶಿವ ಶಿವಾಚಾರ್ಯನಲಿ ;
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರನಲಿ,
ಸಚ್ಚಿದಾನಂದ ಸ್ವರೂಪರಾಗಿ ಜೀವನ್ಮುಕ್ತರಾಗಿರ್ದರು.

೧೧೮

ಕರದಿಷ್ಟದಲಿ ಕಣ್ಣಾಲಿ ನೆರೆನಟ್ಟು ಹೊರ ಸೂಸದೆ,
ಬಲದ ಕರಾಂಗುಲಿಗಳಲಿ ಜಪದೆಣಿಕೆ
ಮಂತ್ರಾರ್ಥ ಭಾವಂಗಳಲಿ ಮನದ ನೆನಿಕೆ ಮನನಿಕೆ ;
ಬಾನಿನಾಚೆ ಭ್ರೂಮಧ್ಯಕೆ ಭಾವದ ಏರಿಕೆ ;
ಅಂಗ ಲಿಂಗವೆಂಬೆರಡಳಿದು,
ಅಳಿಯದೆ ಅಳಲದೆ ಬಳಲದೆ ತಾನೆ ತಾನಾಗಿ ಉಳಿದ
ಸದಾಶಿವ ಗುರುದೇವನ ನಿಜಾರ್ಚನದ ನಿಲವಿಂಗೆ
ನಮೋ ನಮೋ ಎಂಬೆನಯ್ಯ,

೧೧೯

ಕಂಗಳ ನೋಟ, ಕರಸ್ಥಲದ ಮಾಟ ;
ಮನದೊಳಗೆ ಮಂತ್ರದ ಪರಿಣಾಮದೂಟ,
ಭಾವದೊಳಗೆ ಸಂತೃಪ್ತಿಯ ಸವಿ ಕೂಟ ;
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಸದಾಶಿವ ಶಿವಾಚಾರ್ಯನ ಶಿವ ಪೂಜಾ ಸಂಭ್ರಮದ.
ನಿಬ್ಬೆರಗಿನ ನಿಲವಿದು ನೋಡಾ !

೧೨೦

ಕಂಗಳಲಳವಟ್ಟ ಲಿಂಗೈಕ್ಯನ
ಕಣ್ಣು ಸೂತಕಿಗಳೆತ್ತ ಬಲ್ಲರಯ್ಯಾ ?
ಅಂಗದಲಳವಟ್ಟ ಲಿಂಗೈಕ್ಯನ

ತನು ಸೂತಕಿಗಳೆತ್ತ ಬಲ್ಲರಯ್ಯಾ ?
ಲಿಂಗದಲಳವಟ್ಟ ಲಿಂಗೈಕ್ಯನ
ಮನ ಸೂತಕಿಗಳೆತ್ತ ಬಲ್ಲರಯ್ಯಾ ?
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ !
ಎಡೆದೆರಹಿಲ್ಲದ ಧ್ಯಾನ ಧಾರಣಂಗಳಿಂದೆ
ತಾನೆ ತಾನಾದ ಸದಾಶಿವ ಶ್ರೀ ಗುರು ದೇವನ
ಭಾವ ಸೂತಕಿಗಳೆತ್ತ ಬಲ್ಲರಯ್ಯಾ ?

೧೨೧

ಅವರ ಕಂಗಳಲಿ ಮಿಂಚುತ್ತಿತ್ತು ಮಹಾ ಕಳೆ !
ಮಿಂಚುತ್ತಿತ್ತು ಮೊಗದಲಿ ಮಹಾ ಕಳೆ !
ಮಿಂಚುತ್ತಿತ್ತು ಅಂಗಾಂಗಳಲಿ ಲಿಂಗ ಕಳೆ !
ಶಿವ ಸ್ವರೂಪವೆ ತಾನಾದ ಆ ಸದಾಶಿವ ಶಿವಾಚಾರ್ಯರ
ಶಿವೈಕ್ಯ ಸ್ವರೂಪ ರಹಸ್ಯವ ನಿರೂಪಿಸಬಹುದೆ
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಶಬ್ದ ಸಿದ್ಧರಿಗೂ ಸಾಧ್ಯವಿಲ್ಲವಯ್ಯ.

೧೨೨

ಸಚ್ಚೇತನವು ನಿಮ್ಮನಪ್ಪಿ ತನು ಮಹಾತನುವಾದ ಬಳಿಕ,
ನಿಮಗೆ ಬೇರೆ ತನುವೆಂಬುದೆಲ್ಲಿಯೊ ?
ಚಿಚ್ಚೇತನವು ನಿಮ್ಮನಪ್ಪಿ ಮನ ಘನ ಮನವಾದ ಬಳಿಕ,
ನಿಮಗೆ ಬೇರೆ ಮನವೆಂಬುದೆಲ್ಲಿಯೊ ?
ಆನಂದ ಚೇತನವು ನಿಮ್ಮನಪ್ಪಿ ನಿಮ್ಮ ಭಾವ ನಿರ್ಭಾವವಾದ ಬಳಿಕ,
ನಿಮಗೆ ಬೇರೆ ಭಾವವೆಂಬುದೆಲ್ಲಿಯೊ ?
ಇಂತೀ ಮೂರು ಮಹಾ ಲಿಂಗದಲ್ಲಿ ಬೆರೆದೇಕವಾದ ಬಳಿಕ,
ಆ ನಿನ್ನ ನಿಜ ಸದಾ ಸತ್ತೆಯ
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನೊಬ್ಬ ಬಲ್ಲನಲ್ಲದೆ
ನಾವೆತ್ತ ಬಲ್ಲೆವೊ ?

೧೨೩

ನಿಮ್ಮ ತನು ಪೂರ್ಣ, ನಿಮ್ಮ ಮನ ಪೂರ್ಣ ;
ನಿಮ್ಮ ಭಾವ ಪೂರ್ಣ, ನಿಮಾತ್ಮ ಪೂರ್ಣ ;

ಸದಾಶಿವ ಶಿವಾಚಾರ್ಯನೆ, ನೀವು—
ಶ್ರೀನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ ಅಖಂಡ !

೧೨೪

ನಮ್ಮ ಸದಾಶಿವ ಶಿವಾ ಚಾರ್ಯಂಗೆ
ಆದಿಯಿಲ್ಲ, ಮಧ್ಯವಿಲ್ಲ, ಅವಸಾನವಿಲ್ಲ ;
ಸದ್ರೂಪ ಜಂಗಮನಾಗಿ ಆದಿ ಶೂನ್ಯ ;
ಚಿದ್ರೂಪ ಲಿಂಗವಾಗಿ ಮಧ್ಯ ಶೂನ್ಯ ;
ಆನಂದ ರೂಪ ಗುರುವಾಗಿ ಅವಸಾನ ಶೂನ್ಯ.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಸಯವಾದ ಕಾರಣ, ನಿರ್ಲೇಪನಾಗಿ ನಿಸ್ಸಂಗಿಯಾಗಿ
ನಿಶ್ಶೂನ್ಯದಲ್ಲಿ ನಿಜ ಸುಖಿಯಾಗಿಪ್ಪನು—
ಸದಾಕಾಲಿಕವಾಗಿ ಸಂಪೂರ್ಣಾಖಂಡ ಶಿವ ತಾನಾಗಿ !

೧೨೫

'ಬಯಲ' ನುಡಿ ಬಯಲೊಳಗಲ್ಲದೆ
ಬೇರೆ ಬೆರೆವುದೆ ?
ತೇಜ ತೇಜದೊಳಗಲ್ಲದೆ ಬೇರೆ ಬೆರೆವುದೆ ?
ಅರ್ಥ ಮಾತಿನೊಳಗಲ್ಲದೆ ಬೇರೆ ಬೆರೆವುದೆ ?
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಸದಾ ಶಿವನು ಮಹಾ ಶಿವನೊಳಗಲ್ಲದೆ
ಬೇರೆ ಬೆರೆವನೆ ?

೧೨೬

ಇದು ಬದ್ಧನಲ್ಲ, ಹೊದ್ದು ಶೂನ್ಯನಲ್ಲ ;
ಸಿದ್ಧನಾಗಿದ್ದು ಸಿದ್ಧನೆಂದೆನಿಸಿಕೊಳ್ಳಲಿಲ್ಲ .
ಇದ್ದು ಇಲ್ಲದಾತ, ಇಲ್ಲದೆ ಇದ್ದಾತ.
ಪ್ರಕೃತಿ ಪ್ರಪಂಚಗಳ ಹೊದ್ದದೆ ಸದಾಶುದ್ಧ.
ಪರಮ ಪ್ರತಿಭಾನ್ವಿತ ಪ್ರಬುದ್ಧ ನಮ್ಮ ಸದಾಶಿವ ಗುರುದೇವ ನೋಡಾ,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ !

೧೨೭

ಸ್ವಯಂ ಗುರುವಾದನು, ಸ್ವಯಂ ಲಿಂಗವಾದನು ;
ಸ್ವಯಂ ಜಂಗಮವಾದನು, ಸ್ವಯಂ ಶಿವನಾದನು.
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರನಲ್ಲಿ
ಸ್ವಯಂ ಪ್ರಸಾದವಾದನು .
ಸ್ವಯಂ ಪರಮ ಪರಿಣಾಮಿಯಾದನು .

೧೨೮

ನೂರ್ಮನೆಯುಳ್ಳ ಗಿರಿಯ ಪುರವೆಂಬುದೊಂದು ಪ್ರಣತಿ :
ಅದರಲ್ಲಿ ಪ್ರಕೃತಿಯೆಂಬ ತೈಲವನೆರೆದು,
ಸತ್ಕ್ರಿಯಾಚಾರವೆಂಬ ಬತ್ತಿ ಇಕ್ಕಿ
ಸದಾಶಿವನೆಂಬ ಜ್ಯೋತಿ ಹೊತ್ತಿ ಬೆಳಗೆ
ಭಕ್ತರೆಲ್ಲರು ಬಲ್ಲಿದರಾಗಿ ಬದುಕಿಹರು,
ಶಿಷ್ಯರೆಲ್ಲರು ಭಾವುಕರಾಗಿ ಬಾಳಿಹರು,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಕಣ್ದೆರೆದವರು ಕಾರುಣ್ಯವಡೆದಿಹರು.

೧೨೯

ಏನೆಂಬೆನೇನೆಂಬೆ ಮೀರಿದ ಕ್ರಿಯಾಚಾರ ಸಂಪನ್ನನ ?
ಏನೆಂಬೆನೇನೆಂಬೆ ಮೀರಿದ ಜ್ಞಾನಾಚಾರ ಸಂಪನ್ನನ ?
ಏನೆಂಬೆನೇನೆಂಬೆ ಮೀರಿದ ಭಾವಾಚಾರ ಸಂಪನ್ನನ ?
ಏನೆಂಬೆನೇನೆಂಬೆ ಸಾರಾಯ ಸಚ್ಚಾರಿತ್ರ ಸಂಪನ್ನನ ?
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಏನೆಂಬೆನೇನೆಂಬೆ ಸದಾಶಿವ ಮಹಾನುಭಾವನ ?

೧೩೦

ಏನೆಂಬೆನೇನೆಂಬೆ ಭಜಿಸದೆ ಭಕ್ತನಾದವನ ?
ಏನೆಂಬೆನೇನೆಂಬೆ ಈಶನಾಗದೆ ಮಾಹೇಶನಾದವನ ?
ಏನೆಂಬೆನೇನೆಂಬೆ ಪ್ರಸಾದವಿಲ್ಲದೆ ಪ್ರಸಾದಿಯಾದವನ ?
ಏನೆಂಬೆನೇನೆಂಬೆ ಪ್ರಾಣವಿಲ್ಲದೆ ಪ್ರಾಣಲಿಂಗಿಯಾದವನ ?

ಏನೆಂಬೆನೇನೆಂಬೆ ಶರಣಾಗದೆ ಶರಣ ಸಂಬಂಧನ ?
ಏನೆಂಬೆನೇನೆಂಬೆ ರಸವಿಲ್ಲದೆ ಸಮರಸೈಕ್ಯನ ?
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ಏನೆಂಬೆನೇನೆಂಬೆ ಸುರಾಳ ನಿರಾಳವಿಲ್ಲದೆ ನಿರಾಲಂಬವಾದವನ ?

೧೩೧

ನಾಮವಳಿಯದೆ ನಿರ್ನಾಮ ಸನ್ನಹಿತಂಗೆ,
ನಾಮವಳಿಯದೆ ನಿರ್ನೇಮ ಸನ್ನಹಿತಂಗೆ,
ರೂಪವಳಿಯದೆ ನಿರೂಪ ಸ್ವರೂಪಂಗೆ,
ಗುಣವಳಿಯದೆ ನಿರ್ಗುಣನಾದವಂಗೆ,
ಕ್ರೀ ಅಳಿಯದೆ ನಿಷ್ಕ್ರಿಯನಾದವಂಗೆ—
ನಮೋ ನಮೋ ಎಂಬೆನು ಶ್ರೀಸದಾಶಿವಂಗೆ,
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ !

೧೩೨

ಕ್ರಿಯೆಯೆ ಜ್ಞಾನ, ಜ್ಞಾನವೆ ಕ್ರಿಯೆ-ಎಂಬುದ ತೋರಿ,
ಕ್ರಿಯೈಕ್ಯನಾದೆಯಲ್ಲಾ ಸದಾಶಿವದೇವಾ !
ಅನುಭವವೆ ಆನಂದ, ಆನಂದವೆ ಅನುಭಾವ-ಎಂಬುದ ತೋರಿ,
ಚಿದೈಕ್ಯನಾದೆಯಲ್ಲಾ ಸದಾಶಿವಗುರುದೇವಾ !
ಸಂತೋಷವೆ ಸಮರಸ, ಸಮರಸವೆ ಸಂತೋಷ-ಎಂಬುದ ತೋರಿ,
ಸುಖೈಕ್ಯನಾದೆಯಲ್ಲಾ ಸದಾಶಿವಗುರುದೇವಾ !
ಶಿವನೆ ಗುರು, ಗುರುವೆ ಶಿವನೆಂಬುದ ತೋರಿ,
ಶಿವೈಕ್ಯನಾದೆಯಲ್ಲಾ ಸದಾಶಿವ ಗುರುದೇವಾ !
ಗುರುವೆ ಲಿಂಗ, ಲಿಂಗವೆ ಗುರು ಎಂಬುದ ತೋರಿ,
ಲಿಂಗೈಕ್ಯನಾದೆಯಲ್ಲಾ ಸದಾಶಿವ ಗುರುದೇವಾ !
ಗುರುವೆ ಶಿಷ್ಯ, ಶಿಷ್ಯನೆ ಗುರು. ಎಂಬುದ ತೋರಿ,
ಗುರುವಿನೊಳೈಕ್ಯವಾದೆಯಲ್ಲಾ ಸದಾಶಿವ ಗುರುದೇವಾ !
ಆಚಾರ ಪ್ರಸಾದವ-ವಿಚಾರ ಪ್ರಸಾದವ
ಸರ್ವಾಂಗದೊಳು ಸಮವೇದಿಸಿಕೊಂಡು,
ನಿಜದೊಳಗೆ ನಿರವಯಲಾದೆಯಲ್ಲಾ
ಸದಾಶಿವ ಶ್ರೀಗುರುದೇವಾ !

ಎನಗೆ ನಿನ್ನ ಒಕ್ಕು ಮಿಕ್ಕುದನಿಕ್ಕಿ ಎನ್ನನಾಗು ಮಾಡಿ,
ಎನ್ನ ಮನವ ನಿನ್ನ ಚರಣದಲ್ಲಿ ಕರುವಿಟ್ಟುಕೊಂಡು
ಹೋದೆಯಲ್ಲಾ ಸದಾಶಿವ ಗುರುದೇವಾ !
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶಂಗೆ
ಮೀರಿದಾಚಾರವಾಗಿರಬೇಕೆಂದು
ಸಹಜ ಸಮರಸವನೆಯ್ದಿದೆಯಲ್ಲಾ ಸದಾಶಿವ ಗುರುದೇವಾ !

೧೩೩

ಸ್ಥಲ ಹೋಯಿತ್ತೆನಗೆ,
ಸುಖಜಲಹೋಯಿತ್ತೆನಗೆ,
ಪದಾರ್ಥ ಹೋಯಿತ್ತೆನಗೆ,
ಪ್ರಸಾದ ಹೋಯಿತ್ತೆನಗೆ,
ರಸ ಹೋಯಿತ್ತೆನಗೆ,
ಸಮರಸವಾಯಿತ್ತೆನಗೆ ;
ಸತ್ಕಳೆ ಹೋಯಿತ್ತೆನಗೆ,
ಚಿತ್ಕಳೆ ಹೋಯಿತ್ತೆನಗೆ,
ಆನಂದ ಕಳೆ ಹೋಯಿತ್ತೆನಗೆ,
ಇನ್ನು ಆನೆಂತು ಬದುಕುವೆನು ? ಆನೆಂತು ಬಾಳುವೆನು ?
ಇನ್ನು ಮುನ್ನ ಸದಾ-ಶಿವನನ್ನೆನದಿರೆ—
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ನಿಮ್ಮಾಣೆ, ನಿಮ್ಮೊಳಗಾದ ನಿಜಗುರುದೇವನಾಣೆ !

೧೩೪

ನಮ್ಮಯ್ಯ ಹುಟ್ಟಿ ಹುಟ್ಟಿದವನಲ್ಲ,
ಹುಟ್ಟಿ ಸತ್ತವನಲ್ಲ ; ಸತ್ತು ಹುಟ್ಟುವವನಲ್ಲ.
ತೋರಿ ಅಡಗಿಹನು, ಅಡಗಿ ತೋರುತಿಹನು.
ಆಕಾರ ನಿರಾಕಾರ ಏಕಾಕಾರ ನೋಡಯ್ಯ !
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ,
ನಮ್ಮ ಸದಾಶಿವ ಗುರುದೇವ ನಿರಂತರ ಸಹಜನಯ್ಯ !